## ಸಹಕಾರ ಸಂಘಗಳ ಉಪನಿಬಂಧಕರವರ ಕಛೇರಿ, ಕೋಲಾರ ಜಿಲ್ಲೆ, ಕೋಲಾರ ಇವರ ಕಾರ್ಯಾಲಯ

**ವಿಷಯ:** ಬಾಗೇಪಲ್ಲಿ ತಾಲ್ಲೂಕು ಪೊಟ್ಲವಾರಿಪಲ್ಲಿ ಮಹಿಳಾ ಹಾಲು ಉತ್ಪಾದಕರ ಸಹಕಾರ ಸಂಘ ನಿ ಇದರ ನೋಂದಣಿಯನ್ನು ರದ್ದುಪಡಿಸುವ ಬಗ್ಗೆ.

**ಉಲ್ಲೇಖ:** 1. ಈ ಕಛೇರಿಯ ಸಮಸಂಖ್ಯೆ ಆದೇಶದ ದಿನಾಂಕ: 25.8.2005

2. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿಕ್ಕಬಳ್ಳಾಪುರ ಉಪವಿಭಾಗ, ಚಿಕ್ಕಬಳ್ಳಾಪುರ ಇವರ ಪತ್ರದ ಸಂಖ್ಯೆ ಸನಿ:48:ಸಮಾಪನೆ:ಸಿಆರ್.24:2005- 06 ದಿನಾಂಕ: 30.9.2005

**ಪ್ರಸ್ತಾವನೆ:**

ಬಾಗೇಪಲ್ಲಿ ತಾಲ್ಲೂಕು ಪೊಟ್ಲವಾರಿಪಲ್ಲಿ ಮಹಿಳಾ ಹಾಲು ಉತ್ಪಾದಕರ ಸಹಕಾರ ಸಂಘ ನಿ, ಈ ಸಹಕಾರ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು ಚಿಕ್ಕಬಳ್ಳಾಪುರ ಉಪವಿಭಾಗ, ಚಿಕ್ಕಬಳ್ಳಾಪುರ ಇವರ ಆದೇಶ ಸಂಖ್ಯೆ:ಸನಿ:48:ಎಜಿ:ಜೆಓಸಿ:ಆರ್‌ಸಿಎಸ್:ನಂ:24839: 1997-98 ದಿನಾಂಕ: 12.12.1997 ರಂತೆ ನೋಂದಣಿಯಾಗಿದ್ದು ನೋಂದಣಿಯಾದಾಗಿನಿಂದ ತನ್ನ ಕೆಲಸ ಕಾರ್ಯಗಳನ್ನು ನಿರ್ವಹಿಸದೆ ಸ್ಥಗಿತಗೊಂಡಿದ್ದರಿಂದ ಈ ಕಛೇರಿಯ ಉಲ್ಲೇಖ (1)ರ ಆದೇಶದಲ್ಲಿ ಸಂಘವನ್ನು ಋಣ ಸಮಾಪನೆಗೊಳಿಸಿ ಸಹಕಾರ ಅಭಿವೃದ್ಧಿ ಅಧಿಕಾರಿಗಳು, ಬಾಗೇಪಲ್ಲಿ ಇವರನ್ನು ಸಮಾಪಕರನ್ನಾಗಿ ನೇಮಿಸಲಾಗಿತ್ತು. ಈಗ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿಕ್ಕಬಳ್ಳಾಪುರ ಉಪವಿಭಾಗ, ಚಿಕ್ಕಬಳ್ಳಾಪುರ ಇವರು ಈ ಕೆಳಕಂಡಂತೆ ನೋಂದಣಿ ರದ್ದತಿಗೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಬಾಗೇಪಲ್ಲಿ ತಾಲ್ಲೂಕು ಪೊಟ್ಲವಾರಿಪಲ್ಲಿ ಮಹಿಳಾ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಈ ಸಂಘವು ನೋಂದಣಿ ಸಂಖ್ಯೆ ಸನಿ:48: ಎಓಜಿ:ಜೆಓಸಿ:ಆರ್‌ಸಿಎಸ್:ನಂ:24839:1997-98 ದಿನಾಂಕ:12-12-1997 ರಂತೆ ನೋಂದಣಿಯಾಗಿದ್ದು, ನೋಂದಣಿಯಾದಾಗಿನಿಂದ ಯಾವುದೇ ಕೆಲಸ ಕಾರ್ಯಗಳನ್ನು ನಿರ್ವಹಿಸದೆ ಇದ್ದುದರಿಂದ ಸದರಿ ಸಂಘವನ್ನು ಋಣ ಸಮಾಪನೆಗೊಳಿಸಲಾಗಿದೆ.

ಈ ಸಂಘವು ಕಾರ್ಯಾರಂಭ ಮಾಡದ ಕಾರಣ ಪ್ರಾರಂಭದಲ್ಲಿ ಸಂಗ್ರಹಿಸಿದ್ದ ಷೇರುಹಣ 2601.00 ರೂಪಾಯಿಗಳು ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ ನಿ., ಬಾಗೇಪಲ್ಲಿ ಶಾಖೆಯಲ್ಲಿ ಅಮಾನತ್ತು ಖಾತೆಯಲ್ಲಿ ಇದ್ದು, ಸದರಿ ಮೊಬಲಗನ್ನು ಡ್ರಾ ಮಾಡಿ 51 ಜನ ಮಹಿಳೆಯರಿಗೆ ರೂ 2550.00 ರೂಗಳನ್ನು ವಿತರಿಸಲಾಗಿರುತ್ತದೆ. ಬಾಕಿ ಉಳಿದ 51 ರೂಪಾಯಿಗಳು ನಷ್ಟದ ಖಾತೆಗೆ ಖರ್ಚಾಗಿರುತ್ತದೆ.

ಹೀಗಾಗಿ ಸಂಘದ ಆಸ್ತಿ-ಜವಾಬ್ದಾರಿಯನ್ನು 30-9-2005ರ ಅಂತ್ಯಕ್ಕೆ ಶೂನ್ಯಗೊಳಿಸಲಾಗಿರುತ್ತದೆ. ಈ ಹಂತದಲ್ಲಿ ಸಂಘವು ಮುಂದುವರೆಯುವುದರಿಂದ ಸರ್ಕಾರಕ್ಕಾಗಲೀ ಅಥವಾ ಸದಸ್ಯರಿಗಾಗಲೀ ಯಾವುದೇ ಪ್ರಯೋಜನ ಇರುವುದಿಲ್ಲ.

ಈ ಹಿನ್ನಲೆಯಲ್ಲಿ ದಿನಾಂಕ:30.09.2005 ರಂದು ನಡೆಸಿದ ಸಮಾಪಕರ ಸಭೆಯಲ್ಲಿ ಸಂಘದ ನೋಂದಣಿಯನ್ನು ರದ್ದುಪಡಿಸಲು ಕ್ರಮಕೈಗೊಳ್ಳುವಂತೆ ಇಲಾಖಾಧಿಕಾರಿಗಳನ್ನು ಕೋರಲು ತೀರ್ಮಾನಿಸಿದೆ.

ಮೇಲ್ಕಂಡಂತೆ ಪ್ರಸ್ತಾವನೆ ಸಲ್ಲಿಸಿ, ಸಂಘದ ಸದಸ್ಯರಿಗಾಗಲೀ ಅಥವಾ ಸರ್ಕಾರಕ್ಕಾಗಲೀ ಯಾವುದೇ ಪ್ರಯೋಜನ ಇರುವುದಿಲ್ಲವಾದ್ದರಿಂದ ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಪಡಿಸಬೇಕೆಂದು ಕೋರಿ ಈ ಬಗ್ಗೆ ಸಮಾಪಕರು ಕೈಗೊಂಡ ತೀರ್ಮಾನದ ನಡವಳಿಕೆಗಳ ಪ್ರತಿ ಮತ್ತು ಶೂನ್ಯ ಆಸ್ತಿ-ಜವಾಬ್ದಾರಿ ತಃಖ್ತೆ ಮತ್ತು ಮಾಹಿತಿಯನ್ನು ಚೆಕ್‌ಲಿಸ್ಟ್‌ನಲ್ಲಿ ಸಲ್ಲಿಸಿರುತ್ತಾರೆ.

ಈ ರೀತಿ ಸಮಾಪನಾ ಸಂಘದ ಆಸ್ತಿ-ಜವಾಬ್ದಾರಿಯನ್ನು ವಿಲೇವಾರಿ ಮಾಡಿರುವುದು ಸೂಕ್ತವಾಗಿರುವುದರಿಂದ ಹಾಗೂ ಸಂಘವನ್ನು ಮುಂದುವರಿಸಿಕೊಂಡು ಹೋಗುವುದರಿಂದ ಯಾವುದೇ ಪ್ರಯೋಜನ ಇಲ್ಲದೇ ಇರುವುದರಿಂದ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿಕ್ಕಬಳ್ಳಾಪುರ ಉಪವಿಭಾಗ, ಚಿಕ್ಕಬಳ್ಳಾಪುರ ಇವರ ಶಿಫಾರಸ್ಸನ್ನು ಪರಿಗಣಿಸಿ ಈ ಸಂಘದ ನೋಂದಣಿಯನ್ನು ರದ್ದುಪಡಿಸಲು ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

### ಆದೇಶ

### ನಂ:ಡಿಆರ್‌ಕೆ:ಎಲ್‌ಕ್ಯೂಡಿ:ಸಿಆರ್:10:2005-06, ದಿನಾಂಕ: 24ನೇ ನವೆಂಬರ್ 2005

ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959 ರ ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಎಂಡಬ್ಲೂ:69: ಸಿಎಲ್‌ಎಂ:2001 ದಿನಾಂಕ:21.11.2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ ಶ್ರೀ ಶಶಿಧರ ಎಲೆ, ಸಹಕಾರ ಸಂಘಗಳ ಉಪನಿಬಂಧಕರು, ಕೋಲಾರ ಜಿಲ್ಲೆ, ಕೋಲಾರ ಆದ ನಾನು ಪೊಟ್ಲವಾರಿಪಲ್ಲಿ ಮಹಿಳಾ ಹಾಲು ಉತ್ಪಾದಕರ ಸಹಕಾರ ಸಂಘ ನಿ. ಬಾಗೇಪಲ್ಲಿ ತಾಲ್ಲೂಕು ಈ ಸಹಕಾರ ಸಂಘದ ನೋಂದಣಿ ಸಂಖ್ಯೆ ಸನಿ:48:ಎಓಜಿ:ಜೆಓಸಿ:ಆರ್‌ಸಿಎಸ್‌ನಂ:24839:1997-98 ದಿನಾಂಕ:12.12.1997ನ್ನು ರದ್ದುಗೊಳಿಸಿ ಆದೇಶಿಸಿದ್ದೇನೆ.

ಈ ಆದೇಶವು ತಕ್ಷಣದಿಂದ ಜಾರಿಯಲ್ಲಿದ್ದು ಆದೇಶದ ದಿನಾಂಕದಂದು ಸಂಘವು ಅಸ್ತಿತ್ವದಲ್ಲಿ ಇಲ್ಲವೆಂದೂ ಸಂಪೂರ್ಣವಾಗಿ ವಿಸರ್ಜಿತವಾಗಿದೆ ಎಂದು ಪರಿಗಣಿಸತಕ್ಕದ್ದು ಹಾಗೂ ಸಮಾಪಕರು ಸಂಘದ ಸಂಬಂಧಿಸಿದ ದಾಖಲಾತಿಗಳನ್ನು 30 ದಿವಸದೊಳಗಾಗಿ ಈ ಕಛೇರಿಗೆ ಸಲ್ಲಿಸುವಂತೆ ಆದೇಶವನ್ನು ಮಾಡಲಾಗಿರುತ್ತದೆ.

ಈ ಆದೇಶವನ್ನು ಈ ದಿನ ಅಂದರೆ ದಿನಾಂಕ:24.11.2005 ರಂದು ನನ್ನ ಸಹಿ ಹಾಗೂ ಈ ಕಛೇರಿಯ ಮೊಹರಿನೊಂದಿಗೆ ಹೊರಡಿಸಿದೆ.

**ಶಶಿಧರ ಎಲೆ**
ಸಹಕಾರ ಸಂಘಗಳ ಉಪನಿಬಂಧಕರು,
ಕೋಲಾರ ಜಿಲ್ಲೆ ಕೋಲಾರ

ಪಿ.ಆರ್. 170

## ಸಹಕಾರ ಸಂಘಗಳ ಉಪನಿಬಂಧಕರವರ ಕಛೇರಿ, ಕೋಲಾರ ಜಿಲ್ಲೆ, ಕೋಲಾರ ಇವರ ಕಾರ್ಯಾಲಯ

**ವಿಷಯ:** ಮುಳಬಾಗಿಲು ತಾಲ್ಲೂಕು ಬಿದಿರುಬುಟ್ಟಿ ತಯಾರಕರು ಸಹಕಾರ ಸಂಘ ನಿ., ರೆಡ್ಡಿಹಳ್ಳಿ, ಇದರ ನೋಂದಣಿಯನ್ನು ರದ್ದುಪಡಿಸುವ ಬಗ್ಗೆ.

**ಉಲ್ಲೇಖ:** 1. ಈ ಕಛೇರಿಯ ಸಮಸಂಖ್ಯೆ ಆದೇಶದ ದಿನಾಂಕ: 23.10.1999

2. ದಿನಾಂಕ:31.3.2005 ರಂದು ಕೋಲಾರ ಪತ್ರಿಕೆಯಲ್ಲಿ ಹೊರಡಿಸಿರುವ ರೀತ್ಯಾ

3. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ಇವರ ಪತ್ರದ ಸಂಖ್ಯೆ ಸನಿ:49:ಎಲ್‌ಕ್ಯೂಡಿ:ಸಿಆರ್.24:99-2000 ದಿನಾಂಕ: 29.9.2005

**ಪ್ರಸ್ತಾವನೆ:**

ಮುಳಬಾಗಿಲು ತಾಲ್ಲೂಕು ಬಿದಿರುಬುಟ್ಟಿ ತಯಾರಕರ ಸಹಕಾರ ಸಂಘ ನಿ., ರೆಡ್ಡಿಹಳ್ಳಿ ಈ ಸಂಘವು ತನ್ನ ಕೆಲಸ ಕಾರ್ಯಗಳನ್ನು ನಿರ್ವಹಿಸದೆ ಸ್ಥಗಿತಗೊಂಡ ಹಿನ್ನೆಲೆಯಲ್ಲಿ ಈ ಕಛೇರಿಯ ಉಲ್ಲೇಖ (1)ರ ಆದೇಶದಲ್ಲಿ ಸಂಘವನ್ನು ಋಣ ಸಮಾಪನೆಗೊಳಿಸಿ ಸಹಕಾರ ಅಭಿವೃದ್ಧಿ ಅಧಿಕಾರಿಗಳು, ಮುಳಬಾಗಿಲು ತಾಲ್ಲೂಕು ಇವರನ್ನು ಸಮಾಪಕರನ್ನಾಗಿ ನೇಮಿಸಲಾಗಿತ್ತು. ಈಗ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ಇವರು ಈ ಕೆಳಕಂಡಂತೆ ಸದರಿ ಸಂಘದ ನೋಂದಣಿ ರದ್ದತಿಗೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮುಳಬಾಗಿಲು ತಾಲ್ಲೂಕು ಬಿದಿರುಬುಟ್ಟಿ ತಯಾರಕರ ಸಹಕಾರ ಸಂಘ ನಿ., ರೆಡ್ಡಿಹಳ್ಳಿ ಈ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ಇವರ ಆದೇಶ ನೋಂದಣಿ ಸಂಖ್ಯೆ 304:ರಿಜಿಸ್ಟ್ರೇಷನ್:5464:86-87 ದಿನಾಂಕ:16-03-1987 ರಂತೆ ನೋಂದಣಿಯಾಗಿರುತ್ತದೆ. ಸಂಘದ ಲೆಕ್ಕಪರಿಶೋಧನೆಯು 1986-87 ಸಾಲಿನವರೆಗೆ ಮಾತ್ರ ನಡೆದಿದ್ದು ನಂತರ ಲೆಕ್ಕಪರಿಶೋಧನೆಯು ನಡೆದಿರುವುದಿಲ್ಲ.

ಸದರಿ ಸಂಘದ ದಿನಾಂಕ: 30-6-1987 ಕ್ಕೆ ಇದ್ದಂತೆ ಆಸ್ತಿ ಮತ್ತು ಜವಾಬ್ದಾರಿ ತಃಖ್ತೆಯಂತೆ

| | | |
|---|---|---|
| 1) | ಸದಸ್ಯರ ಷೇರು ಬಂಡವಾಳ | ರೂ. 5020.00 |
| 2) | ಕಾರ್ಯದರ್ಶಿ ಚಾಲ್ತಿ | ರೂ. 100.00 |
| 3) | 1986-87 ನೇ ಸಾಲಿನ ಲೆಕ್ಕಪರಿಶೋಧನಾ ಶುಲ್ಕ | ರೂ. 50.00 |
| 4) | 86-87 ನೇಸಾಲಿನ ನಿವ್ವಳ ಲಾಭ | ರೂ. 4645.40 |
| | **ಒಟ್ಟು** | **ರೂ. 9815.40** |

ಮೇಲ್ಕಂಡ ಜವಾಬ್ದಾರಿಗಳನ್ನು ವಿಲೇವಾರಿ ಮಾಡಲು ಸಂಘದಲ್ಲಿ ಯಾವುದೇ ಹಣದ ರಹ ಇರುವುದಿಲ್ಲ ಸಂಘವು ಸರ್ಕಾರದಿಂದ ಯಾವುದೇ ಧನಸಹಾಯವನ್ನು ಪಡೆದಿಲ್ಲ. ಸಂಘದ ಆಸ್ತಿ-ಜವಾಬ್ದಾರಿ ತಃಖ್ತೆಯ ಪ್ರಕಾರ ಸಂಘದ ಆಸ್ತಿಯ ವಿವರಗಳು ಈ ಕೆಳಕಂಡಂತಿರುತ್ತವೆ.

| | | |
|---|---|---|
| 1) | ನಗದು ಶಿಲ್ಕು | ರೂ. 7857.70 |
| 2) | ಡಿ.ಸಿ.ಸಿ. ಬ್ಯಾಂಕ್ ಚಾಲ್ತಿ ಲೆಕ್ಕದಲ್ಲಿ | ರೂ. 100.00 |
| 3) | ರಬ್ಬರ್ ಸ್ಟಾಂಪ್‌ಗಳು | ರೂ. 35.00 |
| 4) | ಕಾರ್ಯದರ್ಶಿಯವರಿಂದ ಷೇರು ಹಣ ಕೈಬಿಟ್ಟಿರುವ ಬಾಬ್ತು | ರೂ. 10.70 |
| 5) | ಅಖೈರು ದಾಸ್ತಾನು | ರೂ. 1812.00 |
| | **ಒಟ್ಟು** | **ರೂ. 9815.40** |

ಈ ಪೈಕಿ ನಗದು ಶಿಲ್ಕು ರೂ. 7857.70, ರಬ್ಬರ್ ಸ್ಟಾಂಪ್‌ಗಳು ರೂ.35.00 ಕಾರ್ಯದರ್ಶಿಯವರಿಂದ ಷೇರು ಹಣ ಕೈಬಿಟ್ಟಿರುವ ಬಾಬ್ತು ರೂ. 10.70 ಮತ್ತು ಅಖೈರು ದಾಸ್ತಾನು 1812.00 ರೂ ಗಳ ವಸೂಲಾತಿಗೆ ಸಂಘದಲ್ಲಿ ಯಾವುದೇ ದಾಖಲಾತಿಗಳು ಇರುವುದಿಲ್ಲ.

ಡಿ.ಸಿ.ಸಿ. ಬ್ಯಾಂಕ್ ನಿ., ಮುಳಬಾಗಿಲು ಶಾಖೆಯಲ್ಲಿ ಚಾಲ್ತಿ ಖಾತೆಯಲ್ಲಿ ರೂ. 100.00 ಗಳು ಇದ್ದು ಅದನ್ನು ಡ್ರಾ ಮಾಡಿ ಅದನ್ನು ಸಂಘದ ನೋಂದಣಿ ರದ್ದತಿ ಪ್ರಸ್ತಾವನೆ ಸಲ್ಲಿಸುವ ಸಂಬಂಧ ಖರ್ಚು ಮಾಡಲಾಗಿದೆ.

ಈ ಸಂಘದ ನೋಂದಣಿ ರದ್ದತಿ ಬಗ್ಗೆ ಏನಾದರೂ ಆಕ್ಷೇಪಣೆ ಇದ್ದಲ್ಲಿ 15 ದಿವಸದ ಒಳಗಾಗಿ ಲಿಖಿತ ಆಕ್ಷೇಪಣೆಯನ್ನು ಸಲ್ಲಿಸುವಂತೆ ದಿನಾಂಕ: 31.3.2005 ರಂದು ಪ್ರಕಟಗೊಂಡ ಕೋಲಾರ ಪತ್ರಿಕೆಯಲ್ಲಿ ಪ್ರಕಟಿಸಿದ್ದರೂ ಸಹ ಯಾರಿಂದಲೂ ಯಾವುದೇ ಆಕ್ಷೇಪಣೆಯು ಬಂದಿರುವುದಿಲ್ಲ.

ಈ ಹಿನ್ನಲೆಯಲ್ಲಿ ದಿನಾಂಕ:29.09.2005 ರಂದು ನಡೆಸಿದ ಸಮಾಪಕರ ಸಭೆಯಲ್ಲಿ ಸಂಘದ ನೋಂದಣಿಯನ್ನು ರದ್ದುಪಡಿಸಲು ಕ್ರಮಕೈಗೊಳ್ಳುವಂತೆ ಇಲಾಖಾಧಿಕಾರಿಗಳನ್ನು ಕೋರಲು ತೀರ್ಮಾನಿಸಿದೆ.

ಮೇಲ್ಕಂಡಂತೆ ಪ್ರಸ್ತಾವನೆ ಸಲ್ಲಿಸಿ, ಸಂಘದ ಸದಸ್ಯರಿಗಾಗಲೀ ಅಥವಾ ಸರ್ಕಾರಕ್ಕಾಗಲೀ ಯಾವುದೇ ಪ್ರಯೋಜನ ಇರುವುದಿಲ್ಲವಾದ್ದರಿಂದ ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಪಡಿಸಬೇಕೆಂದು ಕೋರಿ ಈ ಬಗ್ಗೆ ಸಮಾಪಕರು ಕೈಗೊಂಡ ತೀರ್ಮಾನದ ನಡವಳಿಕೆಗಳ ಪ್ರತಿ ಮತ್ತು ಶೂನ್ಯ ಆಸ್ತಿ-ಜವಾಬ್ದಾರಿ ತಃಖ್ತೆ ಮತ್ತು ಮಾಹಿತಿಯನ್ನು ಚೆಕ್‌ಲಿಸ್ಟ್‌ನಲ್ಲಿ ಸಲ್ಲಿಸಿರುತ್ತಾರೆ.

ಈ ರೀತಿ ಸಮಾಪನಾ ಸಂಘದ ಆಸ್ತಿ-ಜವಾಬ್ದಾರಿಯನ್ನು ವಿಲೇವಾರಿ ಮಾಡಿರುವುದು ಸೂಕ್ತವಾಗಿರುವುದರಿಂದ ಹಾಗೂ ಸಂಘವನ್ನು ಮುಂದುವರಿಸಿಕೊಂಡು ಹೋಗುವುದರಿಂದ ಯಾವುದೇ ಪ್ರಯೋಜನೆ ಇಲ್ಲದೇ ಇರುವುದರಿಂದ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ಇವರ ಶಿಫಾರಸ್ಸನ್ನು ಪರಿಗಣಿಸಿ ಈ ಸಂಘದ ನೋಂದಣಿಯನ್ನು ರದ್ದುಪಡಿಸಲು ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

**ನಂ:ಡಿಆರ್‌ಕೆ:ಎಲ್‌ಕ್ಯೂಡಿ:ಸಿಆರ್:25:99-2000 ದಿನಾಂಕ: 30ನೇ ಸೆಪ್ಟೆಂಬರ್ 2005**

ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959 ರ ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಎಂಡಬ್ಲ್ಯೂ:69: ಸಿಎಲ್‌ಎಂ:2001 ದಿನಾಂಕ:21.11.2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ ಶ್ರೀ ಶಶಿಧರ ಎಲೆ, ಸಹಕಾರ ಸಂಘಗಳ ಉಪನಿಬಂಧಕರು, ಕೋಲಾರ ಜಿಲ್ಲೆ, ಕೋಲಾರ ಆದ ನಾನು ಮುಳಬಾಗಿಲು ತಾಲ್ಲೂಕು ಬಿದಿರುಬುಟ್ಟಿ ತಯಾರಕರ ಸಹಕಾರ ಸಂಘ ನಿ. ರೆಡ್ಡಿಹಳ್ಳಿ ಈ ಸಹಕಾರ ಸಂಘದ ನೋಂದಣಿ ಸಂಖ್ಯೆ 304:ರಿಜಿಸ್ಟ್ರೇಷನ್:5464:86-87 ದಿನಾಂಕ:16.3.1987ನ್ನು ರದ್ದುಗೊಳಿಸಿ ಆದೇಶಿಸಿದ್ದೇನೆ.

ಈ ಆದೇಶವು ತಕ್ಷಣದಿಂದ ಜಾರಿಯಲ್ಲಿದ್ದು ಆದೇಶದ ದಿನಾಂಕದಂದು ಸಂಘವು ಅಸ್ತಿತ್ವದಲ್ಲಿ ಇಲ್ಲವೆಂದೂ ಸಂಪೂರ್ಣವಾಗಿ ವಿಸರ್ಜಿತವಾಗಿದೆ ಎಂದು ಪರಿಗಣಿಸತಕ್ಕದ್ದು ಹಾಗೂ ಸಮಾಪಕರು ಸಂಘದ ಸಂಬಂಧಿಸಿದ ದಾಖಲಾತಿಗಳನ್ನು 30 ದಿವಸದೊಳಗಾಗಿ ಈ ಕಛೇರಿಗೆ ಸಲ್ಲಿಸುವಂತೆ ಆದೇಶವನ್ನು ಮಾಡಲಾಗಿರುತ್ತದೆ.

ಈ ಆದೇಶವನ್ನು ಈ ದಿನ ಅಂದರೆ ದಿನಾಂಕ:30.9.2005 ರಂದು ನನ್ನ ಸಹಿ ಹಾಗೂ ಈ ಕಛೇರಿಯ ಮೊಹರಿನೊಂದಿಗೆ ಹೊರಡಿಸಿದೆ.

**ಶಶಿಧರ ಎಲೆ**
ಸಹಕಾರ ಸಂಘಗಳ ಉಪನಿಬಂಧಕರು,
ಕೋಲಾರ ಜಿಲ್ಲೆ ಕೋಲಾರ

ಪಿ.ಆರ್. 171

## ಸಹಕಾರ ಸಂಘಗಳ ಉಪನಿಬಂಧಕರವರ ಕಛೇರಿ, ಕೋಲಾರ ಜಿಲ್ಲೆ, ಕೋಲಾರ ಇವರ ಕಾರ್ಯಾಲಯ

**ವಿಷಯ:** ಗೌರಿಬಿದನೂರು ತಾಲ್ಲೂಕು ಎಸ್.ಸಿ./ಎಸ್.ಟಿ. ಕಲ್ಲುಕುಟುಕರ ಸಹಕಾರ ಸಂಘ ನಿ., ನಗರಗೆರೆ ಇದರ ನೋಂದಣಿಯನ್ನು ರದ್ದುಪಡಿಸುವ ಬಗ್ಗೆ.

**ಉಲ್ಲೇಖ:** 1. ಈಕಛೇರಿಯ ಸಮಸಂಖ್ಯೆ ಆದೇಶದ ದಿನಾಂಕ:25.8.2005.

2. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿಕ್ಕಬಳ್ಳಾಪುರ ಉಪವಿಭಾಗ, ಚಿಕ್ಕಬಳ್ಳಾಪುರ ಇವರ ಪತ್ರದ ಸಂಖ್ಯೆ:ಸನಿ:48. ಸಮಾಪನೆ:ಸಿಆರ್. 40:2005-06 ದಿನಾಂಕ. 12.1.2006.

**ಪ್ರಸ್ತಾವನೆ:**

ಗೌರಿಬಿದನೂರು ತಾಲ್ಲೂಕು ಎಸ್.ಸಿ.,/ಎಸ್.ಟಿ. ಕಲ್ಲುಕುಟುಕರ ಸಹಕಾರ ಸಂಘ ನಿ., ಈ ಸಹಕಾರ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು. ಚಿಕ್ಕಬಳ್ಳಾಪುರ ಉಪವಿಭಾಗ, ಚಿಕ್ಕಬಳ್ಳಾಪುರ ಇವರ ಆದೇಶದ ಸಂಖ್ಯೆ ಸನಿ:48:ಆರ್‌ಸಿಎಸ್:ನಂ:5367:87-88 ದಿನಾಂಕ:22.1.1988 ರಂತೆ ನೋಂದಣಿಯಾಗಿದ್ದು, ನೋಂದಣಿಯಾದಾಗಿನಿಂದ ಉಪನಿಯಮಗಳ ಪ್ರಕಾರ ತನ್ನ ಕೆಲಸ ಕಾರ್ಯಗಳನ್ನು ನಿರ್ವಹಿಸದೆ ಸ್ಥಗಿತಗೊಂಡಿದ್ದರಿಂದ ಈ ಕಛೇರಿಯ ಉಲ್ಲೇಖ (1) ರ ಆದೇಶದಲ್ಲಿ ಸಂಘವನ್ನು ಋಣ ಸಮಾಪನೆಗೊಳಿಸಿ ಸಹಕಾರ ಅಭಿವೃದ್ಧಿ ಅಧಿಕಾರಿಗಳು, ಗೌರಿಬಿದನೂರು ತಾಲ್ಲೂಕು ಇವರನ್ನು ಸಮಾಪಕರನ್ನಾಗಿ ನೇಮಿಸಲಾಗಿತ್ತು. ಈಗ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿಕ್ಕಬಳ್ಳಾಪುರ ಉಪವಿಭಾಗ, ಚಿಕ್ಕಬಳ್ಳಾಪುರ ಇವರು ಈ ಕೆಳಕಂಡಂತೆ ನೋಂದಣಿ ರದ್ದತಿಗೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಈ ಸಂಘವು ನೋಂದಣಿಯಾದಾಗಿನಿಂದ ಕಾರ್ಯಾರಂಭ ಮಾಡದ ಕಾರಣ ಪ್ರಾರಂಭದಲ್ಲಿ ಸಂಗ್ರಹಿಸಿದ್ದ ಷೇರುಹಣ 2250.00 ರೂಪಾಯಿಗಳು ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ ನಿ., ಗೌರಿಬಿದನೂರು ಶಾಖೆಯಲ್ಲಿ ಅಮಾನತ್ತು ಖಾತೆಯಲ್ಲಿ ಇದ್ದು, ಸದರಿ ಮೊಬಲಗನ್ನು ಕೋಲಾರ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ ನಿ., ಕೇಂದ್ರ ಕಛೇರಿಯ ಶಾಖೆಯಲ್ಲಿ ಸಹಕಾರ ಸಂಘಗಳ ಉಪನಿಬಂಧಕರು, ಕೋಲಾರ ಜಿಲ್ಲೆ ಕೋಲಾರ ಇವರ ಪಿ.ಡಿ. ಖಾತೆ ಸಂಖ್ಯೆ: 17661 ಕ್ಕೆ ದಿನಾಂಕ: 2.1.2006 ರಂದು ವರ್ಗಾಯಿಸಲಾಗಿದೆ.

ಹೀಗಾಗಿ ಸಂಘದ ಆಸ್ತಿ-ಜವಾಬ್ದಾರಿಯನ್ನು 4.1.2006ಕ್ಕೆ ಇದ್ದಂತೆ ಶೂನ್ಯಗೊಳಿಸಲಾಗಿದೆ ಈ ಹಂತದಲ್ಲಿ ಸಂಘವು ಮುಂದುವರೆಯುವುದರಿಂದ ಸರ್ಕಾರಕ್ಕಾಗಲೀ ಅಥವಾ ಸದಸ್ಯರಿಗಾಗಲೀ ಯಾವುದೇ ಪ್ರಯೋಜನ ಇರುವುದಿಲ್ಲ.

ಈ ಹಿನ್ನೆಲೆಯಲ್ಲಿ ದಿನಾಂಕ: 4.1.2006ರಂದು ನಡೆಸಿದ ಸಮಾಪಕರ ಸಭೆಯಲ್ಲಿ ಸಂಘದ ನೋಂದಣಿಯನ್ನು ರದ್ದುಪಡಿಸಲು ಕ್ರಮಕೈಗೊಳ್ಳುವಂತೆ ಇಲಾಖಾಧಿಕಾರಿಗಳನ್ನು ಕೋರಲು ತೀರ್ಮಾನಿಸಿದೆ

ಮೇಲ್ಕಂಡಂತೆ ಪ್ರಸ್ತಾವನೆ ಸಲ್ಲಿಸಿ, ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಪಡಿಸಬೇಕೆಂದು ಕೋರಿ ಈ ಬಗ್ಗೆ ಸಮಾಪಕರು ಕೈಗೊಂಡ ತೀರ್ಮಾನದ ನಡವಳಿಕೆಗಳ ಪ್ರತಿ, ಚೆಕ್‌ಲಿಸ್ಟ್, ಪಿ.ಡಿ. ಖಾತೆಗೆ ಜಮಾ ಮಾಡಿದ ವಿವರಗಳು ಮತ್ತು ಶೂನ್ಯ ಆಸ್ತಿ-ಜವಾಬ್ದಾರಿ ತಃಖ್ತೆಗಳನ್ನು ಸಲ್ಲಿಸಿರುತ್ತಾರೆ.

ಈ ರೀತಿ ಸಮಾಪನಾ ಸಂಘದ ಆಸ್ತಿ-ಜವಾಬ್ದಾರಿಯನ್ನು ಸಮಾಪಕರು ವಿಲೇವಾರಿ ಮಾಡಿರುವುದು ಸೂಕ್ತವಾಗಿರುವುದರಿಂದ ಹಾಗೂ ಸಂಘವನ್ನು ಮುಂದುವರೆಸಿಕೊಂಡು ಹೋಗುವುದರಿಂದ ಯಾವುದೇ ಪ್ರಯೋಜನ ಇಲ್ಲದೇ ಇರುವುದರಿಂದ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿಕ್ಕಬಳ್ಳಾಪುರ ಉಪವಿಭಾಗ, ಚಿಕ್ಕಬಳ್ಳಾಪುರ ಇವರ ಶಿಫಾರಸ್ಸನ್ನು ಪರಿಗಣಿಸಿ ಈ ಸಂಘದ ನೋಂದಣಿಯನ್ನು ರದ್ದುಪಡಿಸಲು ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

### ಆದೇಶ

### ನಂ:ಡಿಆರ್ ಕೆ:ಎಲ್ ಕ್ಯೂಡಿ:ಸಿಆರ್. 40:2005-06 ದಿನಾಂಕ:13ನೇ ಜನವರಿ 2006

ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959 ರ ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ:69: ಸಿಎಲ್‌ಎಂ:2001 ದಿನಾಂಕ: 21.11.2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ ಶ್ರೀ ಡಿ.ಸಿ. ನಾಗರಾಜಯ್ಯ, ಸಹಕಾರ ಸಂಘಗಳ ಉಪನಿಬಂಧಕರು, ಕೋಲಾರ ಜಿಲ್ಲೆ, ಕೋಲಾರ ಆದ ನಾನು ಗೌರಿಬಿದನೂರು ತಾಲ್ಲೂಕು ಎಸ್.ಸಿ.,/ಎಸ್.ಟಿ. ಕಲ್ಲುಕುಟುಕರ ಸಹಕಾರ ಸಂಘ ನಿ., ನಗರಗೆರೆ ಈ ಸಹಕಾರ ಸಂಘದ ನೋಂದಣಿ ಸಂಖ್ಯೆ: ಸನಿ.48.ಆರ್‌ಸಿಎಸ್.ನಂ. 5367:87-88 ದಿನಾಂಕ:22.1.1988 ನ್ನು ರದ್ದುಗೊಳಿಸಿ ಆದೇಶಿಸಿದ್ದೇನೆ.

ಈ ಆದೇಶವು ತಕ್ಷಣದಿಂದ ಜಾರಿಯಲ್ಲಿದ್ದು ಆದೇಶದ ದಿನಾಂಕದಂದು ಸಂಘವು ಅಸ್ತಿತ್ವದಲ್ಲಿ ಇಲ್ಲವೆಂದೂ ಸಂಪೂರ್ಣವಾಗಿ ವಿಸರ್ಜಿತವಾಗಿದೆ ಎಂದು ಪರಿಗಣಿಸತಕ್ಕದ್ದು ಹಾಗೂ ಸಮಾಪಕರು ಸಂಘದ ಸಂಬಂಧಿಸಿದ ದಾಖಲಾತಿಗಳನ್ನು 30 ದಿವಸದೊಳಗಾಗಿ ಈ ಕಛೇರಿಗೆ ಸಲ್ಲಿಸುವಂತೆ ಆದೇಶವನ್ನು ಮಾಡಲಾಗಿರುತ್ತದೆ.

ಈ ಆದೇಶವನ್ನು ಈ ದಿನ ಅಂದರೆ ದಿನಾಂಕ:13.1.2006 ರಂದು ನನ್ನ ಸಹಿ ಹಾಗೂ ಈ ಕಛೇರಿಯ ಮೊಹರಿನೊಂದಿಗೆ ಹೊರಡಿಸಿದೆ.

ಸಹಕಾರ ಸಂಘಗಳ ಉಪನಿಬಂಧಕರು,
ಕೋಲಾರ ಜಿಲ್ಲೆ ಕೋಲಾರ

ಪಿ.ಆರ್. 172

## ಸಹಕಾರ ಸಂಘಗಳ ಉಪನಿಬಂಧಕರವರ ಕಛೇರಿ, ಕೋಲಾರ ಜಿಲ್ಲೆ, ಕೋಲಾರ ಇವರ ಕಾರ್ಯಾಲಯ

**ವಿಷಯ:** ಗೌರಿಬಿದನೂರು ತಾಲ್ಲೂಕು ವೆಂಕಟಾಪುರ ವೃಕ್ಷ ಬೆಳೆಗಾರರ ಸಹಕಾರ ಸಂಘ ನಿ., ಇದರ ನೋಂದಣಿಯನ್ನು ರದ್ದುಪಡಿಸುವ ಬಗ್ಗೆ.

**ಉಲ್ಲೇಖ:** 1. ಈಕಛೇರಿಯ ಸಮಸಂಖ್ಯೆ ಆದೇಶದ ದಿನಾಂಕ:25.8.2005.

2. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿಕ್ಕಬಳ್ಳಾಪುರ ಉಪವಿಭಾಗ, ಚಿಕ್ಕಬಳ್ಳಾಪುರ ಇವರ ಪತ್ರದ ಸಂಖ್ಯೆ:ಸನಿ:48:ಸಮಾಪನೆ:ಸಿಆರ್. 41:2005-06 ದಿನಾಂಕ. 12.1.2006.

**ಪ್ರಸ್ತಾವನೆ:**

ಗೌರಿಬಿದನೂರು ತಾಲ್ಲೂಕು ವೆಂಕಟಾಪುರ ವೃಕ್ಷ ಬೆಳೆಗಾರರ ಸಹಕಾರ ಸಂಘ ನಿ., ಈ ಸಹಕಾರ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿಕ್ಕಬಳ್ಳಾಪುರ ಉಪವಿಭಾಗ, ಚಿಕ್ಕಬಳ್ಳಾಪುರ ಇವರ ಆದೇಶದ ಸಂಖ್ಯೆ: ಸನಿ:48:ಆರ್‌ಸಿಎಸ್:ನಂ:18157:1992.93 ದಿನಾಂಕ: 22.6.1992 ರಂತೆ ನೋಂದಣಿಯಾಗಿದ್ದು, ನೋಂದಣಿಯಾದಾಗಿನಿಂದ ಉಪನಿಯಮಗಳ ಪ್ರಕಾರ ತನ್ನ ಕೆಲಸ ಕಾರ್ಯಗಳನ್ನು ನಿರ್ವಹಿಸದೆ

ಸ್ಥಗಿತಗೊಂಡಿದ್ದರಿಂದ ಈ ಕಛೇರಿಯ ಉಲ್ಲೇಖ (1) ರ ಆದೇಶದಲ್ಲಿ ಸಂಘವನ್ನು ಋಣ ಸಮಾಪನೆಗೊಳಿಸಿ ಸಹಕಾರ ಅಭಿವೃದ್ಧಿ ಅಧಿಕಾರಿಗಳು, ಗೌರಿಬಿದನೂರು ತಾಲ್ಲೂಕು ಇವರನ್ನು ಸಮಾಪಕರನ್ನಾಗಿ ನೇಮಿಸಲಾಗಿತ್ತು. ಈಗ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿಕ್ಕಬಳ್ಳಾಪುರ ಉಪವಿಭಾಗ, ಚಿಕ್ಕಬಳ್ಳಾಪುರ ಇವರು ಈ ಕೆಳಕಂಡಂತೆ ನೋಂದಣಿ ರದ್ದತಿಗೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಈ ಸಂಘವು ನೋಂದಣಿಯಾದಾಗಿನಿಂದ ಕಾರ್ಯಾರಂಭ ಮಾಡದ ಕಾರಣ ಪ್ರಾರಂಭದಲ್ಲಿ ಸಂಗ್ರಹಿಸಿದ್ದ ಷೇರುಹಣ 660.00 ರೂಪಾಯಿಗಳು ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ ನಿ., ಗೌರಿಬಿದನೂರು ಶಾಖೆಯಲ್ಲಿ ಅಮಾನತ್ತು ಖಾತೆಯಲ್ಲಿ ಇದ್ದು, ಸದರಿ ಮೊಬಲಗನ್ನು ಕೋಲಾರ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ ನಿ., ಕೇಂದ್ರ ಕಛೇರಿಯ ಶಾಖೆಯಲ್ಲಿ ಸಹಕಾರ ಸಂಘಗಳ ಉಪನಿಬಂಧಕರು, ಕೋಲಾರ ಜಿಲ್ಲೆ ಕೋಲಾರ ಇವರ ಪಿ.ಡಿ. ಖಾತೆ ಸಂಖ್ಯೆ: 17661 ಕ್ಕೆ ದಿನಾಂಕ: 4.1.2006 ರಂದು ವರ್ಗಾಯಿಸಲಾಗಿದೆ.

ಹೀಗಾಗಿ ಸಂಘದ ಆಸ್ತಿ-ಜವಾಬ್ದಾರಿಯನ್ನು 4.1.2006ಕ್ಕೆ ಇದ್ದಂತೆ ಶೂನ್ಯಗೊಳಿಸಲಾಗಿದೆ ಈ ಹಂತದಲ್ಲಿ ಸಂಘವು ಮುಂದುವರೆಯುವುದರಿಂದ ಸರ್ಕಾರಕ್ಕಾಗಲೀ ಅಥವಾ ಸದಸ್ಯರಿಗಾಗಲೀ ಯಾವುದೇ ಪ್ರಯೋಜನ ಇರುವುದಿಲ್ಲ.

ಈ ಹಿನ್ನೆಲೆಯಲ್ಲಿ ದಿನಾಂಕ: 6.1.2006 ರಂದು ನಡೆಸಿದ ಸಮಾಪಕರು ಸಭೆಯಲ್ಲಿ ಸಂಘದ ನೋಂದಣಿಯನ್ನು ರದ್ದುಪಡಿಸಲು ಕ್ರಮ ಕೈಗೊಳ್ಳುವಂತೆ ಇಲಾಖಾಧಿಕಾರಿಗಳನ್ನು ಕೋರಲು ತೀರ್ಮಾನಿಸಿದೆ.

ಮೇಲ್ಕಂಡಂತೆ ಪ್ರಸ್ತಾವನೆ ಸಲ್ಲಿಸಿ, ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಪಡಿಸಬೇಕೆಂದು ಕೋರಿ ಈ ಬಗ್ಗೆ ಸಮಾಪಕರು ಕೈಗೊಂಡ ತೀರ್ಮಾನದ ನಡವಳಿಕೆಗಳ ಪ್ರತಿ, ಚೆಕ್‌ಲಿಸ್ಟ್, ಪಿ.ಡಿ. ಖಾತೆಗೆ ಜಮಾ ಮಾಡಿದ ವಿವರಗಳು ಮತ್ತು ಶೂನ್ಯ ಆಸ್ತಿ-ಜವಾಬ್ದಾರಿ ತಃಖ್ತೆಗಳನ್ನು ಸಲ್ಲಿಸಿರುತ್ತಾರೆ.

ಈ ರೀತಿ ಸಮಾಪನಾ ಸಂಘದ ಆಸ್ತಿ-ಜವಾಬ್ದಾರಿಯನ್ನು ಸಮಾಪಕರು ವಿಲೇವಾರಿ ಮಾಡಿರುವುದು ಸೂಕ್ತವಾಗಿರುವುದರಿಂದ ಹಾಗೂ ಸಂಘವನ್ನು ಮುಂದುವರೆಸಿಕೊಂಡು ಹೋಗುವುದರಿಂದ ಯಾವುದೇ ಪ್ರಯೋಜನ ಇಲ್ಲದೇ ಇರುವುದರಿಂದ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿಕ್ಕಬಳ್ಳಾಪುರ ಉಪವಿಭಾಗ, ಚಿಕ್ಕಬಳ್ಳಾಪುರ ಇವರ ಶಿಫಾರಸ್ಸನ್ನು ಪರಿಗಣಿಸಿ ಈ ಸಂಘದ ನೋಂದಣಿಯನ್ನು ರದ್ದುಪಡಿಸಲು ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

**ನಂ:ಡಿಆರ್ ಕೆ:ಎಲ್‌ಕ್ಯೂಡಿ:ಸಿಆರ್.42:2005-06 ದಿನಾಂಕ:13ನೇ ಜನವರಿ 2006**

ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959 ರ ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ.69: ಸಿಎಲ್ ಎಂ.2001 ದಿನಾಂಕ: 21.11.2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ ಶ್ರೀ ಡಿ.ಸಿ. ನಾಗರಾಜಯ್ಯ, ಸಹಕಾರ ಸಂಘಗಳ ಉಪನಿಬಂಧಕರು, ಕೋಲಾರ ಜಿಲ್ಲೆ, ಕೋಲಾರ ಆದ ನಾನು ಗೌರಿಬಿದನೂರು ತಾಲ್ಲೂಕು ವೆಂಕಟಾಪುರ ವೃಕ್ಷ ಬೆಳೆಗಾರರ ಸಹಕಾರ ಸಂಘ ನಿ., ಈ ಸಹಕಾರ ಸಂಘದ ನೋಂದಣಿ ಸಂಖ್ಯೆ. ಸನಿ.48.ಆರ್‌ಸಿಎಸ್.ನಂ. 18157:1992 -93 ದಿನಾಂಕ:22.6.1992 ನ್ನು ರದ್ದುಗೊಳಿಸಿ ಆದೇಶಿಸಿದ್ದೇನೆ.

ಈ ಆದೇಶವು ತಕ್ಷಣದಿಂದ ಜಾರಿಯಲ್ಲಿದ್ದು ಆದೇಶದ ದಿನಾಂಕದಂದು ಸಂಘವು ಅಸ್ತಿತ್ವದಲ್ಲಿ ಇಲ್ಲವೆಂದೂ ಸಂಪೂರ್ಣವಾಗಿ ವಿಸರ್ಜಿತವಾಗಿದೆ ಎಂದು ಪರಿಗಣಿಸತಕ್ಕದ್ದು ಹಾಗೂ ಸಮಾಪಕರು ಸಂಘದ ಸಂಬಂಧಿಸಿದ ದಾಖಲಾತಿಗಳನ್ನು 30 ದಿವಸದೊಳಗಾಗಿ ಈ ಕಛೇರಿಗೆ ಸಲ್ಲಿಸುವಂತೆ ಆದೇಶವನ್ನು ಮಾಡಲಾಗಿರುತ್ತದೆ.

ಈ ಆದೇಶವನ್ನು ಈ ದಿನ ಅಂದರೆ ದಿನಾಂಕ:13.1.2006 ರಂದು ನನ್ನ ಸಹಿ ಹಾಗೂ ಈ ಕಛೇರಿಯ ಮೊಹರಿನೊಂದಿಗೆ ಹೊರಡಿಸಿದೆ.

ಸಹಕಾರ ಸಂಘಗಳ ಉಪನಿಬಂಧಕರು,
ಕೋಲಾರ ಜಿಲ್ಲೆ ಕೋಲಾರ

ಪಿ.ಆರ್. 173

**ಸಹಕಾರ ಸಂಘಗಳ ಉಪನಿಬಂಧಕರವರ ಕಛೇರಿ, ಕೋಲಾರ ಜಿಲ್ಲೆ, ಕೋಲಾರ ಇವರ ಕಾರ್ಯಾಲಯ**

**ವಿಷಯ:** ಗೌರಿಬಿದನೂರು ತಾಲ್ಲೂಕು ಅಲ್ಕುಂದ ವೃಕ್ಷ ಬೆಳೆಗಾರರ ಸಹಕಾರ ಸಂಘ ನಿ., ಇದರ ನೋಂದಣಿಯನ್ನು ರದ್ದುಪಡಿಸುವ ಬಗ್ಗೆ.

**ಉಲ್ಲೇಖ:**
1. ಈ ಕಛೇರಿಯ ಸಮಸಂಖ್ಯೆ ಆದೇಶದ ದಿನಾಂಕ:25.8.2005.
2. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿಕ್ಕಬಳ್ಳಾಪುರ ಉಪವಿಭಾಗ, ಚಿಕ್ಕಬಳ್ಳಾಪುರ ಇವರ ಪತ್ರದ ಸಂಖ್ಯೆ:ಸನಿ:48. ಸಮಾಪನೆ:ಸಿಆರ್. 39:2005-06 ದಿನಾಂಕ. 04.1.2006.

**ಪ್ರಸ್ತಾವನೆ:**

ಗೌರಿಬಿದನೂರು ತಾಲ್ಲೂಕು ಅಲ್ಕುಂದ ವೃಕ್ಷ ಬೆಳೆಗಾರರ ಸಹಕಾರ ಸಂಘ ನಿ., ಈ ಸಹಕಾರ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿಕ್ಕಬಳ್ಳಾಪುರ ಉಪವಿಭಾಗ, ಚಿಕ್ಕಬಳ್ಳಾಪುರ ಇವರ ಆದೇಶದ ಸಂಖ್ಯೆ ಸನಿ:48:ಆರ್‌ಸಿಎಸ್:ನಂ:21309:1993-94 ದಿನಾಂಕ:5.3.1995 ರಂತೆ ನೋಂದಣಿಯಾಗಿದ್ದು, ನೋಂದಣಿಯಾದಾಗಿನಿಂದ ಉಪನಿಯಮಗಳ ಪ್ರಕಾರ ತನ್ನ ಕೆಲಸ ಕಾರ್ಯಗಳನ್ನು ನಿರ್ವಹಿಸದೆ ಸ್ಥಗಿತಗೊಂಡಿದ್ದರಿಂದ ಈ ಕಛೇರಿಯ ಉಲ್ಲೇಖ (1) ರ ಆದೇಶದಲ್ಲಿ ಸಂಘವನ್ನು ಋಣ ಸಮಾಪನೆಗೊಳಿಸಿ ಸಹಕಾರ ಅಭಿವೃದ್ಧಿ ಅಧಿಕಾರಿಗಳು, ಗೌರಿಬಿದನೂರು ತಾಲ್ಲೂಕು ಇವರನ್ನು ಸಮಾಪಕರನ್ನಾಗಿ ನೇಮಿಸಲಾಗಿತ್ತು. ಈಗ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿಕ್ಕಬಳ್ಳಾಪುರ ಉಪವಿಭಾಗ, ಚಿಕ್ಕಬಳ್ಳಾಪುರ ಇವರು ಈ ಕೆಳಕಂಡಂತೆ ನೋಂದಣಿ ರದ್ದತಿಗೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಈ ಸಂಘವು ನೋಂದಣಿಯಾದಾಗಿನಿಂದ ಕಾರ್ಯಾರಂಭ ಮಾಡದ ಕಾರಣ ಪ್ರಾರಂಭದಲ್ಲಿ ಸಂಗ್ರಹಿಸಿದ್ದ ಷೇರುಹಣ 1298.00 ರೂಪಾಯಿಗಳು ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ ನಿ., ಗೌರಿಬಿದನೂರು ಶಾಖೆಯಲ್ಲಿ ಅಮಾನತ್ತು ಖಾತೆಯಲ್ಲಿ ಇದ್ದು, ಸದರಿ ಮೊಬಲಗನ್ನು ಕೋಲಾರ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ ನಿ., ಕೇಂದ್ರ ಕಛೇರಿಯ ಶಾಖೆಯಲ್ಲಿ ಸಹಕಾರ ಸಂಘಗಳ ಉಪನಿಬಂಧಕರು, ಕೋಲಾರ ಜಿಲ್ಲೆ ಕೋಲಾರ ಇವರ ಪಿ.ಡಿ. ಖಾತೆ ಸಂಖ್ಯೆ: 17661 ಕ್ಕೆ ದಿನಾಂಕ: 4.1.2006 ರಂದು ವರ್ಗಾಯಿಸಲಾಗಿದೆ.

ಹೀಗಾಗಿ ಸಂಘದ ಆಸ್ತಿ-ಜವಾಬ್ದಾರಿಯನ್ನು 4.1.2006ಕ್ಕೆಇದ್ದಂತೆ ಶೂನ್ಯಗೊಳಿಸಲಾಗಿದೆ ಈ ಹಂತದಲ್ಲಿ ಸಂಘವು ಮುಂದುವರೆಯುವುದರಿಂದ ಸರ್ಕಾರಕ್ಕಾಗಲೀ ಅಥವಾ ಸದಸ್ಯರಿಗಾಗಲೀ ಯಾವುದೇ ಪ್ರಯೋಜನ ಇರುವುದಿಲ್ಲ.

ಈ ಹಿನ್ನೆಲೆಯಲ್ಲಿ ದಿನಾಂಕ: 5.1.2006 ರಂದು ನಡೆಸಿದ ಸಮಾಪಕರ ಸಭೆಯಲ್ಲಿ ಸಂಘದ ನೋಂದಣಿಯನ್ನು ರದ್ದುಪಡಿಸಲು ಕ್ರಮಕೈಗೊಳ್ಳುವಂತೆ ಇಲಾಖಾಧಿಕಾರಿಗಳನ್ನು ಕೋರಲು ತೀರ್ಮಾನಿಸಿದೆ.

ಮೇಲ್ಕಂಡಂತೆ ಪ್ರಸ್ತಾವನೆ ಸಲ್ಲಿಸಿ, ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಪಡಿಸಬೇಕೆಂದು ಕೋರಿ ಈ ಬಗ್ಗೆ ಸಮಾಪಕರು ಕೈಗೊಂಡ ತೀರ್ಮಾನದ ನಡವಳಿಕೆಗಳ ಪ್ರತಿ, ಚೆಕ್‌ಲಿಸ್ಟ್, ಪಿ.ಡಿ. ಖಾತೆಗೆ ಜಮಾ ಮಾಡಿದ ವಿವರಗಳು ಮತ್ತು ಶೂನ್ಯ ಆಸ್ತಿ-ಜವಾಬ್ದಾರಿ ತಃಖ್ತೆಗಳನ್ನು ಸಲ್ಲಿಸಿರುತ್ತಾರೆ.

ಈ ರೀತಿ ಸಮಾಪನಾ ಸಂಘದ ಆಸ್ತಿ-ಜವಾಬ್ದಾರಿಯನ್ನು ಸಮಾಪಕರು ವಿಲೇವಾರಿ ಮಾಡಿರುವುದು ಸೂಕ್ತವಾಗಿರುವುದರಿಂದ ಹಾಗೂ ಸಂಘವನ್ನು ಮುಂದುವರೆಸಿಕೊಂಡು ಹೋಗುವುದರಿಂದ ಯಾವುದೇ ಪ್ರಯೋಜನ ಇಲ್ಲದೇ ಇರುವುದರಿಂದ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿಕ್ಕಬಳ್ಳಾಪುರ ಉಪವಿಭಾಗ, ಚಿಕ್ಕಬಳ್ಳಾಪುರ ಇವರ ಶಿಫಾರಸ್ಸನ್ನು ಪರಿಗಣಿಸಿ ಈ ಸಂಘದ ನೋಂದಣಿಯನ್ನು ರದ್ದುಪಡಿಸಲು ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

**ನಂ:ಡಿಆರ್ ಕೆ:ಎಲ್‌ಕ್ಯೂಡಿ:ಸಿಆರ್. 43:2005-06 ದಿನಾಂಕ:13ನೇ ಜನವರಿ 2006**

ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959 ರ ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ.69: ಸಿಎಲ್‌ಎಂ:2001 ದಿನಾಂಕ: 21.11.2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ ಶ್ರೀ ಡಿ.ಸಿ. ನಾಗರಾಜಯ್ಯ, ಸಹಕಾರ ಸಂಘಗಳ ಉಪನಿಬಂಧಕರು, ಕೋಲಾರ ಜಿಲ್ಲೆ, ಕೋಲಾರ ಆದ ನಾನು ಗೌರಿಬಿದನೂರು ತಾಲ್ಲೂಕು ಅಲ್ಕುಂದ ವೃಕ್ಷ ಬೆಳೆಗಾರರ ಸಹಕಾರ ಸಂಘ ನಿ., ಈ ಸಹಕಾರ ಸಂಘದ ನೋಂದಣಿ ಸಂಖ್ಯೆ: ಸನಿ.48.ಆರ್‌ಸಿಎಸ್.ನಂ. 21309:1993-94 ದಿನಾಂಕ:5.3.1995 ನ್ನು ರದ್ದುಗೊಳಿಸಿ ಆದೇಶಿಸಿದ್ದೇನೆ.

ಈ ಆದೇಶವು ತಕ್ಷಣದಿಂದ ಜಾರಿಯಲ್ಲಿದ್ದು ಆದೇಶದ ದಿನಾಂಕದಂದು ಸಂಘವು ಅಸ್ತಿತ್ವದಲ್ಲಿ ಇಲ್ಲವೆಂದೂ ಸಂಪೂರ್ಣವಾಗಿ ವಿಸರ್ಜಿತವಾಗಿದೆ ಎಂದು ಪರಿಗಣಿಸತಕ್ಕದ್ದು ಹಾಗೂ ಸಮಾಪಕರು ಸಂಘದ ಸಂಬಂಧಿಸಿದ ದಾಖಲಾತಿಗಳನ್ನು 30 ದಿವಸದೊಳಗಾಗಿ ಈ ಕಛೇರಿಗೆ ಸಲ್ಲಿಸುವಂತೆ ಆದೇಶವನ್ನು ಮಾಡಲಾಗಿರುತ್ತದೆ.

ಈ ಆದೇಶವನ್ನು ಈ ದಿನ ಅಂದರೆ ದಿನಾಂಕ:13.1.2006 ರಂದು ನನ್ನ ಸಹಿ ಹಾಗೂ ಈ ಕಛೇರಿಯ ಮೊಹರಿನೊಂದಿಗೆ ಹೊರಡಿಸಿದೆ.

ಸಹಕಾರ ಸಂಘಗಳ ಉಪನಿಬಂಧಕರು,
ಕೋಲಾರ ಜಿಲ್ಲೆ, ಕೋಲಾರ.

ಪಿ.ಆರ್. 174

**ಸಹಕಾರ ಸಂಘಗಳ ಉಪನಿಬಂಧಕರವರ ಕಛೇರಿ ಕೋಲಾರ ಜಿಲ್ಲೆ, ಕೋಲಾರ ಇವರ ಕಾರ್ಯಾಲಯ**

**ವಿಷಯ:** ಚರ್ಮಹದ ಮಾಡುವವರ ಸಹಕಾರ ಸಂಘ ನಿ., ಬೂಡಿದೇರು, ಮುಳಬಾಗಿಲು ತಾಲ್ಲೂಕು ಇದರ ನೋಂದಣಿಯನ್ನು ರದ್ದುಪಡಿಸುವ ಬಗ್ಗೆ.

**ಉಲ್ಲೇಖ:**
1. ಈ ಕಛೇರಿಯ ಸಮಸಂಖ್ಯೆ ಆದೇಶದ ದಿನಾಂಕ:20.2.1984.
2. ದಿನಾಂಕ:31.3.2005 ರಂದು ಕೋಲಾರ ಪತ್ರಿಕೆಯಲ್ಲಿ ಹೊರಡಿಸಿರುವ ಪ್ರಕಟಣೆ ರೀತ್ಯಾ.
3. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ಇವರ ಪ್ರಸ್ತಾವನೆ ಪತ್ರ ಸಂಖ್ಯೆ ಸನಿ:49:ಎಲ್‌ಕ್ಯೂಡಿ: ಸಿಆರ್.6:2005-06 ದಿನಾಂಕ: 30.9.2005

**ಪ್ರಸ್ತಾವನೆ:**

ಚರ್ಮಹದ ಮಾಡುವವರ ಸಹಕಾರ ಸಂಘ ನಿ., ಬೂಡಿದೇರು, ಮುಳಬಾಗಿಲು ತಾಲ್ಲೂಕು ಈ ಸಂಘವು ತನ್ನ ಕೆಲಸ ಕಾರ್ಯಗಳನ್ನು ನಿರ್ವಹಿಸದೆ ಸ್ಥಗಿತಗೊಂಡ ಹಿನ್ನೆಲೆಯಲ್ಲಿ ಈ ಕಛೇರಿಯ ಉಲ್ಲೇಖ(1) ರ ಆದೇಶದಲ್ಲಿ ಸಂಘವನ್ನು ಋಣ ಸಮಾಪನೆಗೊಳಿಸಿ ಸಹಕಾರ ಅಭಿವೃದ್ಧಿ ಅಧಿಕಾರಿಗಳು, ಮುಳಬಾಗಿಲು ತಾಲ್ಲೂಕು ಇವರನ್ನು ಸಮಾಪಕರನ್ನಾಗಿ ನೇಮಿಸಲಾಗಿತ್ತು. ಈಗ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಕೋಲಾರ ಉಪವಿಭಾಗ ಕೋಲಾರ ಇವರು ಈ ಕೆಳಕಂಡಂತೆ ಸದರಿ ಸಂಘದ ನೋಂದಣಿ ರದ್ದತಿಗೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಚರ್ಮಹದ ಮಾಡುವವರ ಸಹಕಾರ ಸಂಘ ನಿ., ಬೂಡಿದೇರು, ಮುಳಬಾಗಿಲು ತಾಲ್ಲೂಕು ಈ ಸಂಘವು ನೋಂದಣಿ ಸಂಖ್ಯೆ.ಎಆರ್‌ಕೆ:963 ದಿನಾಂಕ:20.7.1982 ರ ರೀತ್ಯಾ ನೋಂದಣಿಯಾಗಿರುತ್ತದೆ. ತಃಖ್ತೆಯ ಪ್ರಕಾರ ಜವಾಬ್ದಾರಿ 14.000/- ರೂ ಗಳಷ್ಟಿದ್ದು ಪಾವತಿಸಲು ಯಾವುದೇ ಹಣದ ರಹಾ ಇರುವುದಿಲ್ಲ ಮತ್ತು ಇದಕ್ಕೆ ಸಂಬಂಧಿಸಿದಂತೆ ಯಾವುದೇ ದಾಖಲಾತಿಗಳಿಲ್ಲ. ತಃಖ್ತೆಯ ಪ್ರಕಾರ ಸಂಘದ ಆಸ್ತಿ ರೂ, 14.000/ರೂಗಳಷ್ಟಿದ್ದು ವಸೂಲಿ ಮಾಡಲು ಸಂಘದಲ್ಲಿ ಯಾವುದೇ ದಾಖಲಾತಿಗಳಿರುವುದಿಲ್ಲ ಡಿ.ಸಿ.ಸಿ. ಬ್ಯಾಂಕ್ ನಿ., ಮುಳಬಾಗಿಲು ಶಾಖೆ ಇದರಲ್ಲಿ ಸಂಘದ ಯಾವುದೇ ಹಣವಿರುವುದಿಲ್ಲ ಸರ್ಕಾರದಿಂದ ಯಾವುದೇ ರೀತಿಯ ಧನ ಸಹಾಯವನ್ನು ಈ ಸಂಘವು ಪಡೆದುಕೊಂಡಿರುವುದಿಲ್ಲ.

ಈ ಸಂಘದ ನೋಂದಣಿ ರದ್ದತಿ ಬಗ್ಗೆ ಏನಾದರೂ ಆಕ್ಷೇಪಣೆ ಇದ್ದಲ್ಲಿ 15 ದಿವಸದ ಒಳಗಾಗಿ ಲಿಖಿತ ಆಕ್ಷೇಪಣೆಯನ್ನು ಸಲ್ಲಿಸುವಂತೆ ದಿನಾಂಕ:31.3.2005 ರಂದು ಪ್ರಕಟಗೊಂಡ ಕೋಲಾರ ಪತ್ರಿಕೆಯಲ್ಲಿ ಪ್ರಕಟಿಸಿದ್ದರೂ ಸಹ ಯಾರಿಂದಲೂ ಯಾವುದೇ ಆಕ್ಷೇಪಣೆಯು ಬಂದಿರುವುದಿಲ್ಲ.

ಈ ಹಿನ್ನೆಲೆಯಲ್ಲಿ ದಿನಾಂಕ: 29.9.2005 ರಂದು ನಡೆಸಿದ ಸಮಾಪಕರ ಸಭೆಯಲ್ಲಿ ಸಂಘದ ನೋಂದಣಿಯನ್ನು ರದ್ದುಪಡಿಸಲು ಕ್ರಮಕೈಗೊಳ್ಳುವಂತೆ ಸಮಾಪಕರು/ ಇಲಾಖಾಧಿಕಾರಿಗಳನ್ನು ಕೋರಲು ತೀರ್ಮಾನಿಸಿದೆ.

ಮೇಲ್ಕಂಡಂತೆ ಪ್ರಸ್ತಾವನೆ ಸಲ್ಲಿಸಿ, ಸಂಘದ ಸದಸ್ಯರಿಗಾಗಲೀ ಅಥವಾ ಸರ್ಕಾರಕ್ಕಾಗಲೀ ಯಾವುದೇ ಪ್ರಯೋಜನ ಇರುವುದಿಲ್ಲವಾದ್ದರಿಂದ ಸಂಘದ ನೋಂದಣಿ ಸಂಖ್ಯೆಯನ್ನು ರದ್ದು ಪಡಿಸಬೇಕೆಂದು ಕೋರಿ ಈ ಬಗ್ಗೆ ಸಮಾಪಕರು ಕೈಗೊಂಡ ತೀರ್ಮಾನದ ನಡವಳಿಕೆಗಳ ಪ್ರತಿ ಮತ್ತು ಶೂನ್ಯ ಆಸ್ತಿ-ಜವಾಬ್ದಾರಿ ತಃಖ್ತೆ ಮತ್ತು ಮಾಹಿತಿಯನ್ನು ಚೆಕ್ ಲಿಸ್ಟ್ ನಲ್ಲಿ ಸಲ್ಲಿಸಿರುತ್ತಾರೆ.

ಈ ರೀತಿ ಸಮಾಪನಾ ಸಂಘದ ಆಸ್ತಿ-ಜವಾಬ್ದಾರಿಯನ್ನು ಸಮಾಪಕರು ವಿಲೇವಾರಿ ಮಾಡಿರುವುದು ಸೂಕ್ತವಾಗಿರುವುದರಿಂದ ಹಾಗೂ ಸಂಘವನ್ನು ಮುಂದುವರೆಸಿಕೊಂಡು ಹೋಗುವುದರಿಂದ ಯಾವುದೇ ಪ್ರಯೋಜನ ಇಲ್ಲದೇ ಇರುವುದರಿಂದ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ಇವರ ಶಿಫಾರಸ್ಸನ್ನು ಪರಿಗಣಿಸಿ ಈ ಸಂಘದ ನೋಂದಣಿಯನ್ನು ರದ್ದುಪಡಿಸಲು ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

**ನಂ:ಡಿಆರ್ ಕೆ:ಎಲ್‌ಕ್ಯೂಡಿ:ಸಿಆರ್. 353:83-84 ದಿನಾಂಕ:30ನೇ ಸೆಪ್ಟೆಂಬರ್ 2005**

ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959 ರ ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ.69: ಸಿಎಲ್ ಎಂ.2001 ದಿನಾಂಕ: 21.11.2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ ಶ್ರೀ ಶಶಿಧರ ಎಲ್, ಸಹಕಾರ ಸಂಘಗಳ

ಉಪನಿಬಂಧಕರು, ಕೋಲಾರ ಜಿಲ್ಲೆ, ಕೋಲಾರ ಆದ ನಾನು ಚರ್ಮಹದ ಮಾಡುವವರ ಸಹಕಾರ ಸಂಘ ನಿ., ಬೂಡಿದೇರು, ಮುಳಬಾಗಿಲು ತಾಲ್ಲೂಕು ಈ ಸಹಕಾರ ಸಂಘದ ನೋಂದಣಿ ಸಂಖ್ಯೆ.ಎಆರ್ ಕೆ:963 ದಿನಾಂಕ:20.7.1982 ನ್ನು ರದ್ದುಗೊಳಿಸಿ ಆದೇಶಿಸಿದ್ದೇನೆ.

ಈ ಆದೇಶವು ತಕ್ಷಣದಿಂದ ಜಾರಿಯಲ್ಲಿದ್ದು ಆದೇಶದ ದಿನಾಂಕದಂದು ಸಂಘವು ಅಸ್ತಿತ್ವದಲ್ಲಿ ಇಲ್ಲವೆಂದೂ ಸಂಪೂರ್ಣವಾಗಿ ವಿಸರ್ಜಿತವಾಗಿದೆ ಎಂದು ಪರಿಗಣಿಸತಕ್ಕದ್ದು ಹಾಗೂ ಸಮಾಪಕರು ಸಂಘದ ಸಂಬಂಧಿಸಿದ ದಾಖಲಾತಿಗಳನ್ನು 30 ದಿವಸದೊಳಗಾಗಿ ಈ ಕಛೇರಿಗೆ ಸಲ್ಲಿಸುವಂತೆ ಆದೇಶವನ್ನು ಮಾಡಲಾಗಿರುತ್ತದೆ.

ಈ ಆದೇಶವನ್ನು ಈ ದಿನ ಅಂದರೆ ದಿನಾಂಕ:30.9.2005 ರಂದು ನನ್ನ ಸಹಿ ಹಾಗೂ ಈ ಕಛೇರಿಯ ಮೊಹರಿನೊಂದಿಗೆ ಹೊರಡಿಸಿದೆ

**ಶಶಿಧರ ಎಲೆ**

ಪಿ.ಆರ್. 175

ಸಹಕಾರ ಸಂಘಗಳ ಉಪನಿಬಂಧಕರು,
ಕೋಲಾರ ಜಿಲ್ಲೆ ಕೋಲಾರ.

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

### ಅಧಿಕೃತ ಜ್ಞಾಪನ ಸಂಖ್ಯೆ: ಎಲ್.ಆರ್.ಎಫ್/ಸಿಆರ್: 20/05-06, ದಿನಾಂಕ: 26ನೇ ನವೆಂಬರ್ 2005

**ವಿಷಯ:** ಆಕ್ಸ್ಸ್ ಮಿನಿಸ್ಟ್ರೀಸ್, ಬೆಂಗಳೂರು ರವರು ಆನೇಕಲ್ ತಾಲ್ಲೂಕು, ಸರ್ಜಾಪುರ ಹೋಬಳಿ, ಗಟ್ಟಹಳ್ಳಿ ಗ್ರಾಮದ ಸ.ನಂ. 33 ರಲ್ಲಿ 1-00 ಎಕರೆ ಜಮೀನನ್ನು ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಖರೀದಿಗೆ ಪಡೆಯಲು ಅನುಮತಿ ಕೋರಿರುವ ಬಗ್ಗೆ.

ಆಕ್ಸ್ಸ್ ಮಿನಿಸ್ಟ್ರೀಸ್, ಬೆಂಗಳೂರು ರವರು ಆನೇಕಲ್ ತಾಲ್ಲೂಕು, ಸರ್ಜಾಪುರ ಹೋಬಳಿ, ಗಟ್ಟಹಳ್ಳಿ ಗ್ರಾಮದ ಸ.ನಂ. 33 ರಲ್ಲಿ 1-00 ಎಕರೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಖರೀದಿಸಲು ಮಾಡಿರುವ ಬೇಡಿಕೆ ಹಾಗೂ ನಮೂನೆ-15ಎ ಮತ್ತು ನಮೂನೆ-15ಎಎ ರಲ್ಲಿ ನೀಡಿದ ಮಾಹಿತಿ ಅನುಸರಿಸಿ ಉಪವಿಭಾಗಾಧಿಕಾರಿಗಳು, ಬೆಂಗಳೂರು ದಕ್ಷಿಣ ಉಪ ವಿಭಾಗ ರವರ ಪತ್ರ ಸಂಖ್ಯೆ:ಎಲ್.ಆರ್.ಎಫ್(ಎ)(109)ಸಿಆರ್:03/05-06, ದಿನಾಂಕ: 14.9.2005 ರಲ್ಲಿ ಪ್ರಸ್ತಾಪಿತ ಗ್ರಾಮದ ಸ.ನಂ. 33 ರಲ್ಲಿ 1-00 ಎಕರೆ ಜಮೀನನ್ನು ಖರೀದಿಗೆ ಪಡೆಯಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (i)(ii) ರಡಿ ವಿನಾಯ್ತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಸಂಸ್ಥೆಯು ಕಂಪನಿಗಳ ನೋಂದಣಾಧಿಕಾರಿಗಳ ಕಛೇರಿ, ಬೆಂಗಳೂರು ಈ ಕಛೇರಿಯಲ್ಲಿ ದಿನಾಂಕ: 24.5.1979 ರಂದು ನೊಂದಾಯಿಸಲ್ಪಟ್ಟಿದೆ. ಖಾತೆದಾರರಿಂದ ಜಮೀನು ಖರೀದಿಗೆ ಪಡೆಯಲು ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾಪಿತ ಜಮೀನು ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್) ಕಾಯ್ದೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳೂ ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ರ ಕಲಂ 109ರ ಪ್ರಕಾರ ಶೈಕ್ಷಣಿಕ ಉದ್ದೇಶಕ್ಕೆ 04 ಯೂನಿಟ್‌ಗಳವರೆಗೆ ಜಮೀನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ತಿದ್ದುಪಡಿ ಕಾಯ್ದೆ 1995ರ ಪ್ರಕಾರ ಕಲಂ 109 (i)(ii) ಮತ್ತು ಕರ್ನಾಟಕ ಭೂ ಸುಧಾರಣೆ ತಿದ್ದುಪಡಿ ಕಾಯಿದೆ 1961 ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ಆನೇಕಲ್ ತಾಲ್ಲೂಕು, ಸರ್ಜಾಪುರ ಹೋಬಳಿ, ಗಟ್ಟಹಳ್ಳಿ ಗ್ರಾಮದ ಸ.ನಂ. 33 ರಲ್ಲಿ 1-00 ಎಕರೆ ಜಮೀನನ್ನು ಆಕ್ಸ್ಸ್ ಮಿನಿಸ್ಟ್ರೀಸ್, ನಂ.54, 55 ಎಂ.ಐ.ಜಿ. ಕೆಹೆಚ್‌ಬಿ ಕಾಲೋನಿ, 5ನೇ ಬ್ಲಾಕ್, ಕೋರಮಂಗಲ, ಬೆಂಗಳೂರು-95 ರವರಿಗೆ ಶೈಕ್ಷಣಿಕ ಉದ್ದೇಶಕ್ಕಾಗಿ ಖರೀದಿಸಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ಕಲಂ 109 (i)(ii) ರಡಿ ಹಾಗೂ ಸರ್ಕಾರದ ತಿದ್ದುಪಡಿ ಅಧಿಸೂಚನೆ ನಂ: ವ್ಯಶಾಇ 47 ಶಾಸನ 2001 ಬೆಂಗಳೂರು ದಿನಾಂಕ: 23.4.2003 ರಂತೆ ಕೈಗಾರಿಕಾ ಉದ್ದೇಶಕ್ಕೆ 02 ಯೂನಿಟ್‌ಗಳಿದ್ದು, ಜಮೀನನ್ನು ಹೊಂದಲು ಅವಕಾಶ ಕಲ್ಪಿಸಿದೆ. ಹಾಗೂ ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಅನುಮತಿ ನೀಡಿದೆ.

**ಷರತ್ತುಗಳು**

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಗೆ ಪಡೆಯಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಈ ಬಗ್ಗೆ ತಹಸೀಲ್ದಾರ್‌ರವರ ಮೂಲಕ ಈ ಕಛೇರಿಗೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯಿದೆ 1995 ಕಲಂ 3 ರಲ್ಲಿ ಹೇಳಿರುವಂತೆ ಶೇಕಡ 55 ಪೆಯಿಡ್ ಆಫ್ ಷೇರು ಬಂಡವಾಳ ಹೊಂದಿರುವ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ಬೇರೆ ರೀತಿ ವರ್ಗಾಯಿಸಬಾರದು.
3. ಸದರಿ ಜಮೀನು ಸಿ.ಡಿ.ಪಿ. ಪ್ರಕಾರ ಹಸಿರು ಪಟ್ಟಿ ವಲಯದಲ್ಲಿ ಬರುತ್ತಿದ್ದು, ಉದ್ದೇಶಿತ ಯೋಜನೆಗೆ ಉಪಯೋಗಿಸಿಕೊಳ್ಳಲು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಿಂದ ಭೂ ಬದಲಾವಣೆ ಮಾಡಿಕೊಳ್ಳತಕ್ಕದ್ದು.
4. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯಿದೆ 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯತಕ್ಕದ್ದು.
5. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿಡಿಪಿ, ಒಡಿಪಿ ಹಾಗೂ ಹಸಿರು ವಲಯ ವ್ಯಾಪ್ತಿಯೊಳಗೆ, ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
6. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾದ ಅನುಮತಿಯನ್ನು ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ವಿಹಿತ ಮಾಡಲಾಗುವುದು.
7. ಈ ಅನುಮತಿ ಭೂ ಸುಧಾರಣೆ ಕಾಯಿದೆ 1961ರ ಕಲಂ 109 ರನ್ವಯ ಮಾತ್ರ ಮಾಡಿರುತ್ತದೆ. ಬೇರೆ ಕಾನೂನುಗಳಿಗೆ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

ಪಿ.ಆರ್. 178

ವಿಶೇಷ ಜಿಲ್ಲಾಧಿಕಾರಿಗಳು (ಕಂ), ಬೆಂಗಳೂರು ಜಿಲ್ಲೆ, ಬೆಂಗಳೂರು.

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಉಪನಿಬಂಧಕರ ಕಛೇರಿ-2, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು-03

**ಸಂಖ್ಯೆ: ಡಿಆರ್‌ಬಿ/2/ಸಮಾಪನೆ/38/2005-06, ದಿನಾಂಕ: 20ನೇ ಫೆಬ್ರವರಿ 2006**

**ವಿಷಯ :** ಸಮಾಪನೆಯಲ್ಲಿರುವ ಸೇನಾವಿಹಾರ ಕೋ-ಆಪರೇಟಿವ್ ಹೌಸಿಂಗ್ ಸೊಸೈಟಿ ಲಿಮಿಟೆಡ್, ಬೆಂಗಳೂರು, ಇದರ ನೋಂದಣಿ ರದ್ದುಗೊಳಿಸುವ ಬಗ್ಗೆ.

**ಉಲ್ಲೇಖ :** 1) ಈ ಕಛೇರಿ ಆದೇಶ ಸಮಸಂಖ್ಯೆ ದಿನಾಂಕ: 29.07.2005.
2) ಸಹಕಾರಿ ಅಭಿವೃದ್ಧಿ ಅಧಿಕಾರಿ, ಬೆಂಗಳೂರು ದಕ್ಷಿಣ ತಾಲ್ಲೂಕು, ಇವರ ಪತ್ರ ದಿನಾಂಕ: 07.02.2006.
3) ಸಹಕಾರ ಸಂಘಗಳ ಸಹಾಯಕ ನಿಬಂಧಕರು 3ನೇ ವಲಯ, ಬೆಂಗಳೂರು ಇವರ ಪ್ರಸ್ತಾವ ದಿನಾಂಕ: 20.02.2006.

**ಪ್ರಸ್ತಾವನೆ:**

ಮೇಲೆ ಉಲ್ಲೇಖ-1 ರಲ್ಲಿರುವ ಆದೇಶದಂತೆ ಸೇನಾವಿಹಾರ ಕೋ-ಆಪರೇಟಿವ್ ಹೌಸಿಂಗ್ ಸೊಸೈಟಿ ಲಿಮಿಟೆಡ್, ಬೆಂಗಳೂರು, ಇದನ್ನು ಸಮಾಪನೆಗೊಳಿಸಿ ಸಮಾಪನಾಧಿಕಾರಿಯನ್ನು ನೇಮಿಸಿದ್ದು, ಈ ಆದೇಶದ ವಿರುದ್ಧ ಸಂಘದ ಸದಸ್ಯರು ಮೇಲ್ಮನವಿ ಸಲ್ಲಿಸಿದ್ದು, ಸದರಿ ಮೇಲ್ಮನವಿಯನ್ನು ಅಪೀಲು ಪ್ರಾಧಿಕಾರವು ವಜಾ ಮಾಡಿ, ಈ ಕಛೇರಿ ಆದೇಶವನ್ನು ಎತ್ತಿ ಹಿಡಿದಿರುತ್ತದೆ. ಸದರಿ ಸಮಾಪನೆಯಾದ ಸಂಘದ ಪೂರ್ಣ ಪ್ರಭಾರವನ್ನು ಸೇನಾವಿಹಾರ ಪ್ಲಾಟ್ ಮತ್ತು ಹೌಸ್ ಓನರ್ಸ್ ಅಸೋಸಿಯೇಷನ್, ಬೆಂಗಳೂರು, ಇವರಿಗೆ ವಹಿಸಿಕೊಟ್ಟಿದ್ದು, ಸಂಘದ ನೋಂದಣಿಯನ್ನು ರದ್ದುಗೊಳಿಸಲು ಉಲ್ಲೇಖ 2 ಮತ್ತು 3 ರಲ್ಲಿರುವ ಪ್ರಸ್ತಾವದಲ್ಲಿ ಶಿಫಾರಸ್ಸು ಮಾಡಿರುತ್ತಾರೆ. ಮೇಲೆ ತಿಳಿಸಿದ ಪ್ರಸ್ತಾವವನ್ನು ಪರಿಶೀಲಿಸಿ, ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 75 ರಲ್ಲಿ ಪ್ರತ್ಯಾಯೋಜನೆಯಾಗಿರುವ ಅಧಿಕಾರವನ್ನು ಚಲಾಯಿಸುತ್ತಾ, ಸಹಕಾರ ಸಂಘಗಳ ಉಪನಿಬಂಧಕರು-2, ಬೆಂಗಳೂರು ನಗರ ಜಿಲ್ಲೆ, ಆದ ನಾನು ಸೇನಾವಿಹಾರ ಕೋ-ಆಪರೇಟಿವ್ ಹೌಸಿಂಗ್ ಸೊಸೈಟಿ ಲಿ., ಬೆಂಗಳೂರು, ಇದರ ನೋಂದಣಿ ಸಂಖ್ಯೆ: ಎಆರ್‌ಬಿ-44/ಆರ್‌ಜಿಎನ್/353/19763/94-95, ದಿನಾಂಕ: 20.05.1994 ರದ್ದುಗೊಳಿಸಿರುತ್ತೇನೆ. ಇದರಿಂದಾಗಿ ಈ ಸಂಘವು ಈ ಆದೇಶ ದಿನಾಂಕದಿಂದ ವಿಸರ್ಜನೆಯಾಗಿರುತ್ತದೆ ಮತ್ತು ಈ ಆದೇಶದ ದಿನಾಂಕದಿಂದ ವಿಸರ್ಜನೆಯಾಗಿದ್ದು, ಸಂಘ-ಸಂಸ್ಥೆಯಾಗಿರುವುದು (ಕಾರ್ಪೊರೇಟ್ ಬಾಡಿ) ನಿಂತು ಹೋಗಿರುತ್ತದೆ.

ಈ ಆದೇಶವನ್ನು ನನ್ನ ಸ್ವಸಹಿ ಮತ್ತು ಈ ಕಛೇರಿ ಮೊಹರಿನೊಂದಿಗೆ ದಿನಾಂಕ: 20.02.2006 ರಂದು ಹೊರಡಿಸಲಾಗಿದೆ.

**ಭೀಮಸೇನ ಬಂಕದ**

ಪಿ.ಆರ್. 573 ಸಹಕಾರ ಸಂಘಗಳ ಉಪನಿಬಂಧಕರು-2, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು.

## ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ನಿರ್ದೇಶಕರ ಕಾರ್ಯಾಲಯ,

## ಸರ್ಕಾರಿ ಮುದ್ರಣಾಲಯ, ನಂ.6/ಇ, 1ನೇ ಅಡ್ಡರಸ್ತೆ, ಕೆ.ಐ.ಎ.ಡಿ.ಬಿ.ಪೀಣ್ಯ 1ನೇ ಹಂತ, ತುಮಕೂರು ರಸ್ತೆ, ಬೆಂಗಳೂರು-560 058

**ಪ್ರಕಟಣೆ ಸಂಖ್ಯೆ: ಎಸ್.594/ ದಿನಾಂಕ: 4 / 6ನೇ ಮಾರ್ಚ್ 2006**

2005-2006ನೇ ಸಾಲಿನ ವಾರ್ಷಿಕ ಸರಕು ಪರಿಶೀಲನೆಯ ಪ್ರಯುಕ್ತ ಬೆಂಗಳೂರಿನಲ್ಲಿರುವ ಸರ್ಕಾರಿ ಲೇಖನ ಸಾಮಗ್ರಿ ಮಳಿಗೆಯಲ್ಲಿ ದಿನಾಂಕ: 1.4.2006 ರಿಂದ 22.4.2006 ರವರೆಗೆ ಎಲ್ಲಾ ಸರ್ಕಾರಿ ಕಛೇರಿಗಳಿಗೆ ಲೇಖನ ಸಾಮಗ್ರಿಗಳ ಮತ್ತು ಕಾಗದಗಳ ನೀಡಿಕೆಯನ್ನು ನಿಲ್ಲಿಸಲಾಗುತ್ತದೆ ಎಂಬ ವಿಷಯವನ್ನು ಸಂಬಂಧಿಸಿದ ಎಲ್ಲಾ ಸರ್ಕಾರಿ ಕಛೇರಿ ಹಾಗೂ ಅರೆ ಸರ್ಕಾರಿ ಕಛೇರಿಗಳಿಗೆ ಈ ಮೂಲಕ ತಿಳಿಯಪಡಿಸಲಾಗಿದೆ.

**ಹೆಚ್. ಗಂಗಯ್ಯ**
ನಿರ್ದೇಶಕರು.

## OFFICE OF THE DIRECTOR OF PRINTING, STATIONERY AND PUBLICATIONS

## GOVERNMENT PRESS, NO.6/E, 1st CROSS, K.I.A.D.B. PEENYA 1st STAGE, TUMKUR ROAD, BANGALORE-560 058

**NOTIFICATION No. S.594/ Dated: 4 / 6th March 2006**

It is hereby notified for the information of all the Government and Semi Government offices that there will be no issue of stationery articles and papers from the Government Stationery Depot, Bangalore from 1.4.2006 to 22.4.2006 (Both days inclusive) on account of Annual Stocke Verification for the year 2005-2006.

**H. GANGAIAH**
DIRECTOR

P.R. 579

## ಜಿಲ್ಲಾ ಅಧಿಕಾರಿಗಳ ಕಛೇರಿ, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆ,

## ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು

**ಪ್ರಕಟಣೆ ಸಂಖ್ಯೆ: ಹಿಂವಅಇ:ಬೆಂಗ್ರಾ:ಬಿ3:ಸಿಆರ್-7/2005-06, ದಿನಾಂಕ: 25ನೇ ಫೆಬ್ರವರಿ 2006**

**ವಿಷಯ :** 2005-2006ನೇ ಸಾಲಿನಲ್ಲಿ ಬೆಂಗಳೂರು (ಗ್ರಾ) ಜಿಲ್ಲೆಯಿಂದ ಹಿಂದುಳಿದ ವರ್ಗಗಳ ಕಾನೂನು ಪದವೀಧರರನ್ನು ನ್ಯಾಯಾಂಗ ಆಡಳಿತ ಹಾಗೂ ವಕೀಲ ವೃತ್ತಿಯ ತರಬೇತಿಗೆ ಅಭ್ಯರ್ಥಿಗಳನ್ನು ಆಯ್ಕೆ ಮಾಡುವ ಬಗ್ಗೆ ಅರ್ಜಿಗಳನ್ನು ಕರೆಯುವ ಬಗ್ಗೆ.

**ಉಲ್ಲೇಖ :** 1) ಸರ್ಕಾರದ ಆದೇಶ ಸಂಖ್ಯೆ: ಎಸ್‌ಡಬ್ಲ್ಯೂಎಲ್ 68:ಎಸ್‌ಇಡಬ್ಲ್ಯೂ 89, ದಿನಾಂಕ: 2.11.1990.
2) ಸರ್ಕಾರದ ಆದೇಶ ಸಂಖ್ಯೆ: ಸಕಇ 205 ಬಿಎಂಎಸ್ 99, ದಿನಾಂಕ: 17.10.1989.
3) ಸರ್ಕಾರದ ಆದೇಶ ಸಂಖ್ಯೆ: ಸಕಇ 446 ಬಿಎಂಎಸ್ 2005, ದಿನಾಂಕ: 1.12.2005.

2005-06ನೇ ಸಾಲಿನಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಗೆ ಸೇರಿರುವ ಹಿಂದುಳಿದ ವರ್ಗದವರಾದ ಅಂದರೆ ವರ್ಗ-1, 2ಎ, 3ಎ, 3ಬಿ ವರ್ಗಗಳಿಗೆ ಸೇರಿದ ಕಾನೂನು ಪದವೀಧರರಿಂದ ನ್ಯಾಯಾಂಗ ಆಡಳಿತದಲ್ಲಿ ಹಾಗೂ ತರಬೇತಿ ಅವಧಿಯಲ್ಲಿ ತರಬೇತಿ ಭತ್ಯೆ ಮಂಜೂರಾತಿಗಾಗಿ ಅಭ್ಯರ್ಥಿಗಳನ್ನು ಆಯ್ಕೆ ಮಾಡಲು ಅರ್ಜಿಗಳನ್ನು ಆಹ್ವಾನಿಸಲಾಗಿದೆ.

ಹಿಂದುಳಿದ ವರ್ಗಗಳಿಗೆ ಸೇರಿದ ಈ ಕೆಳಕಂಡ ನಿಬಂಧನೆಗಳನ್ನು ಪಾಲಿಸಬಲ್ಲ ಕಾನೂನು ಪದವೀಧರ ಅಭ್ಯರ್ಥಿಗಳ ನಿಗದಿತ ಅರ್ಜಿ ನಮೂನೆಯನ್ನು ಈ ಕಛೇರಿಯಲ್ಲಿ ಪಡೆದು ಭರ್ತಿ ಮಾಡಲಾದ ಅರ್ಜಿಗಳನ್ನು ಸದಸ್ಯ ಕಾರ್ಯದರ್ಶಿಗಳು, ಕಾನೂನು ಪದವೀಧರರ ಆಯ್ಕೆ ಸಮಿತಿ ಹಾಗೂ ಜಿಲ್ಲಾ ಅಧಿಕಾರಿಗಳು, ಹಿಂದುಳಿದ ವರ್ಗಗಳ ಹಾಗೂ ಅಲ್ಪಸಂಖ್ಯಾತರ ಇಲಾಖೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ, 1ನೇ ಮಹಡಿ, ಪೋಡಿಯಂ ಬ್ಲಾಕ್, ವಿಶ್ವೇಶ್ವರಯ್ಯ ಕೇಂದ್ರ, ಡಾ: ಅಂಬೇಡ್ಕರ್ ವೀದಿ ಬೆಂಗಳೂರು ಇವರ ಕಛೇರಿಯಲ್ಲಿ ದಿನಾಂಕ: 25.3.2006 ರೊಳಗೆ ಸಲ್ಲಿಸುವುದು.

1) ಅಭ್ಯರ್ಥಿಯು ಕಾನೂನು ಪದವೀಧರರಾಗಿದ್ದು, ಈ ತರಬೇತಿಗೆ ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕಕ್ಕೆ ಅಭ್ಯರ್ಥಿಯು ಕಾನೂನು ಪದವಿ ಮುಗಿಸಿ 2 ವರ್ಷಗಳು ಮೀರಿರಬಾರದು.
2) ಅಭ್ಯರ್ಥಿಗಳು ಸರ್ಕಾರದ ಆದೇಶ ಸಂಖ್ಯೆ: ಎಸ್‌ಡಬ್ಲ್ಯೂಡಿ 150 ಬಿಸಿಎ 94, ದಿನಾಂಕ: 17ನೇ ಸೆಪ್ಟೆಂಬರ್ 94ರ ಆದೇಶದ ಅನುಸಾರ ಹಿಂದುಳಿದ ವರ್ಗ-1, 2ಎ, 3ಎ ಮತ್ತು 3ಬಿ ವರ್ಗೀಕರಣಕ್ಕೆ ಒಳಪಟ್ಟಿರಬೇಕು. ಹಾಗೂ ಮೇಲ್ಕಂಡ ವರ್ಗಗಳಿಗೆ ನಿಗದಿಪಡಿಸಲಾದ ಜಾತಿ ಆದಾಯ ಪ್ರಮಾಣ ಪತ್ರಗಳಲ್ಲಿ ವಿವರಗಳನ್ನು ಭರ್ತಿ ಮಾಡಿ, ಭರ್ತಿ ಮಾಡಲಾದ ಅರ್ಜಿಯೊಂದಿಗೆ ಲಗತ್ತಿಸಿ ಸಲ್ಲಿಸಬೇಕು.
3) ಪ್ರವರ್ಗ-1ನ್ನು ಹೊರತುಪಡಿಸಿ ಇತರೆ ವರ್ಗಗಳಿಗೆ ಸೇರಿದ ಅಭ್ಯರ್ಥಿಗಳಿಗೆ ರೂ.15,000-00 ಗಳ ವಾರ್ಷಿಕ ಆದಾಯ ಮಿತಿಯನ್ನು ನಿಗದಿಪಡಿಸಲಾಗಿದೆ.
4) ಅಭ್ಯರ್ಥಿಗಳು ಬಾರ್ ಕೌನ್ಸಿಲ್‌ನಲ್ಲಿ ಹೆಸರನ್ನು ನೋಂದಾಯಿಸಿರಬೇಕು.
5) ಭರ್ತಿ ಮಾಡಲಾದ ಅರ್ಜಿಗಳನ್ನು ಸಲ್ಲಿಸಲು ನಿಗದಿಪಡಿಸಲಾದ ಕೊನೆಯ ದಿನಾಂಕಕ್ಕೆ ಅಭ್ಯರ್ಥಿಗಳ ವಯಸ್ಸು 30 ವರ್ಷಗಳು ಮೀರಿರಬಾರದು. ಆದರೆ ವರ್ಗ-1ರ ಅಭ್ಯರ್ಥಿಗಳಿಗೆ ಒಂದು ವರ್ಷದ ರಿಯಾಯ್ತಿ ಇದ್ದು, ಅವರುಗಳು 31 ವರ್ಷ ಮೀರಿರಬಾರದು.
6) ಅಭ್ಯರ್ಥಿಯ ಕೌಟುಂಬಿಕ ವಾರ್ಷಿಕ ವರಮಾನ ರೂ.15,000-00 ಗಳಿಗೆ ಮೀರಿರಬಾರದು. ಆದರೆ ವರ್ಗ-1 ರಲ್ಲಿ ಬರುವ ಮತೀಯ ಅಲ್ಪಸಂಖ್ಯಾತರ ಅಭ್ಯರ್ಥಿಗಳಿಗೆ ಆದಾಯ ಮಿತಿ ಇರುವುದಿಲ್ಲ. ಆಯ್ಕೆಯಾದ ಅಭ್ಯರ್ಥಿಗಳಿಗೆ 4 ವರ್ಷಗಳ ತರಬೇತಿ ಅವಧಿ ಇದ್ದು, ಈ ಮಧ್ಯದಲ್ಲಿ ತರಬೇತಿಯನ್ನು ಬಿಡಲು ಅವಕಾಶವಿರುವುದಿಲ್ಲ. ಆಯ್ಕೆಯಾದ ಅಭ್ಯರ್ಥಿಗಳಿಗೆ 4 ವರ್ಷಗಳ ತರಬೇತಿ ಅವಧಿ ಇದ್ದು, ಈ ಮಧ್ಯದಲ್ಲಿ ತರಬೇತಿಯನ್ನು ಬಿಡಲು ಅವಕಾಶವಿರುವುದಿಲ್ಲಾ. ಆದರೆ ಕೇಂದ್ರ ಸರ್ಕಾರ:ರಾಜ್ಯ ಸರ್ಕಾರದ ಕೆಲಸ ಸಿಕ್ಕಿದ ಅಭ್ಯರ್ಥಿಗಳಿಗೆ ಈ ಬಗ್ಗೆ ರಿಯಾಯಿತಿ ಇರುತ್ತದೆ.
7) ಆಯ್ಕೆಯಾದ ಅಭ್ಯರ್ಥಿಗಳಿಗೆ ತರಬೇತಿಯ ಅವಧಿಯಲ್ಲಿ ತಿಂಗಳಿಗೆ 1,000-00 ರೂ.ಗಳ ತರಬೇತಿ ಭತ್ಯೆಯನ್ನು ನೀಡಲಾಗುವುದು.
8) ಆಯ್ಕೆಯಾದ ಅಭ್ಯರ್ಥಿಗೆ ಜಿಲ್ಲಾ ಆಯ್ಕೆ ಸಮಿತಿಯು ಪಬ್ಲಿಕ್ ಪ್ರಾಸಿಕ್ಯೂಟರ್ಸ್, ಸರ್ಕಾರಿ ವಕೀಲರು ಅಥವಾ 20 ವರ್ಷಗಳಿಗಿಂತ ಹೆಚ್ಚಿನ ವರ್ಷಗಳು ವಕೀಲಿ ವೃತ್ತಿಯಲ್ಲಿ ಸೇವೆ ಸಲ್ಲಿಸುತ್ತಿರುವ ಹಿರಿಯ ವಕೀಲರಲ್ಲಿ ಕಾನೂನು ತರಬೇತಿ ಪಡೆಯುವ ಸಲುವಾಗಿ ತರಬೇತಿಗೆ ಕಳುಹಿಸಿಕೊಡಲಾಗುವುದು.
9) ಆಯ್ಕೆಯಾದ ಅಭ್ಯರ್ಥಿಯು ಈ ಇಲಾಖೆಯ ನಿಬಂಧನೆಗಳು ಹಾಗೂ ಸರ್ಕಾರದ ಆದೇಶಗಳಿಗೆ ಬದ್ಧನಾಗಿರುತ್ತೇನೆಂದು ಮುಚ್ಚಳಿಕೆಯನ್ನು ಬರೆದುಕೊಡಬೇಕು.
10) ಆಯ್ಕೆಯಾದ ಅಭ್ಯರ್ಥಿಯು ಸುಳ್ಳು ಮಾಹಿತಿ ನೀಡಿದ್ದಲ್ಲಿ ಅಥವಾ ತರಬೇತಿ ಅವಧಿಯ ಮಧ್ಯದಲ್ಲಿ ತರಬೇತಿಯಿಂದ ಬಿಟ್ಟು ಹೋದಲ್ಲಿ ಸರ್ಕಾರ ಅವರಿಗಾಗಿ ಖರ್ಚು ಮಾಡಿದ ಹಣವನ್ನು ವರ್ಷಕ್ಕೆ ಶೇ.10 ರಷ್ಟು ಬಡ್ಡಿಯೊಂದಿಗೆ ಭೂ ಕಂದಾಯ ಬಾಕಿ ಎಂದು ಪರಿಗಣಿಸಿ ವಸೂಲಿ ಮಾಡಲಾಗುವುದು.
11) ಹೆಚ್ಚಿನ ಮಾಹಿತಿಯನ್ನು ಅಭ್ಯರ್ಥಿಗಳು ಜಿಲ್ಲಾ ಅಧಿಕಾರಿಗಳು, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ, 1ನೇ ಮಹಡಿ, ಪೋಡಿಯಂ ಬ್ಲಾಕ್, ವಿಶ್ವೇಶ್ವರಯ್ಯ ಕೇಂದ್ರ, ಡಾ: ಅಂಬೇಡ್ಕರ್ ಬೀದಿ, ಬೆಂಗಳೂರು-1 ಇವರ ಕಛೇರಿಯ ವೇಳೆಯಲ್ಲಿ ಪಡೆಯಬಹುದು.
12) ಅರ್ಹ ಅಭ್ಯರ್ಥಿಗಳಿಗೆ ಆಯ್ಕೆ ಸಮಿತಿಯು ಸಂದರ್ಶನದ ದಿನಾಂಕ ಮತ್ತು ಸ್ಥಳಗಳನ್ನು ತಿಳಿಸಿದಾಗ ಸಂದರ್ಶನಕ್ಕೆ ಅಭ್ಯರ್ಥಿಗಳು ತಮ್ಮ ಸ್ವಂತ ಖರ್ಚಿನಲ್ಲಿ ಹಾಜರಾಗತಕ್ಕದ್ದು.
13) ಅಭ್ಯರ್ಥಿಗಳು ಭರ್ತಿ ಮಾಡಲಾದ ಅರ್ಜಿಯೊಂದಿಗೆ ಅವಶ್ಯಕ ಮಾಹಿತಿಗಳಾದ ಕಾನೂನು ಪದವಿ ಪರೀಕ್ಷೆಯಲ್ಲಿ ತೇರ್ಗಡೆಯೊಂದಿಗೆ ಪ್ರಮಾಣಪತ್ರ ಹಾಗೂ ಅಂಕ ಪಟ್ಟಿಗಳ ದೃಢೀಕರಣ ಪ್ರತಿ ಹಾಗೂ ಜನ್ಮ ದಿನಾಂಕದ ಆಧಾರಕ್ಕಾಗಿ ಎಸ್.ಎಸ್.ಎಲ್.ಸಿ. ಅಂಕಪಟ್ಟಿ ಅಥವಾ ಟಿ.ಸಿ. ದೃಢೀಕೃತ ಪ್ರತಿಯನ್ನು ಲಗತ್ತಿಸಬೇಕು.
14) ಅಪೂರ್ಣ ಮಾಹಿತಿಗಳಿಂದ ಕೂಡಿದ ಅರ್ಜಿಗಳನ್ನು ಹಾಗೂ ನಿಗದಿತ ದಿನಾಂಕದ ನಂತರ ಸ್ವೀಕೃತಿಯಾದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

ಸದಸ್ಯ ಕಾರ್ಯದರ್ಶಿಗಳು ಹಾಗೂ ಜಿಲ್ಲಾ ಅಧಿಕಾರಿಗಳು,
ಹಿಂದುಳಿದ ವರ್ಗಗಳ ಹಾಗೂ ಅಲ್ಪಸಂಖ್ಯಾತರ ಇಲಾಖೆ,
ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು.

ಪಿ.ಆರ್. 578

## ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳ ಕಾರ್ಯಾಲಯ, ಧಾರವಾಡ

## ಅಧಿಸೂಚನೆ

**ಸಂಖ್ಯೆ: ತಾಸಕ:ಎಸ್.1:ಸಿಆರ್-4:2005-06/833, ದಿನಾಂಕ: 15ನೇ ಫೆಬ್ರವರಿ 2006**

**ವಿಷಯ :** ಮಾಹಿತಿ ಹಕ್ಕು ಪಡೆಯಲು ಅಧಿನಿಯಮ 2005ರ ಅನುಷ್ಠಾನದ ಬಗ್ಗೆ.

**ಉಲ್ಲೇಖ :** ಮಾಹಿತಿ ಹಕ್ಕು ಪಡೆಯಲು ಅಧಿನಿಯಮ 2005 (2005ರ ಕೇಂದ್ರ ಕಾಯ್ದೆ ಸಂಖ್ಯೆ 22)

ರಾಜ್ಯದಲ್ಲಿ ನಾಗರೀಕರಿಗೆ ಮಾಹಿತಿ ಪಡೆಯುವ ಅವಕಾಶದ ಹಕ್ಕಿಗಾಗಿ ಒಂದು ಶಾಸನವನ್ನು ರಚಿಸುವುದು ಅಗತ್ಯವೆಂದು ಮನಗಂಡು "ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2005" (2005ರ ಕೇಂದ್ರ ಕಾಯ್ದೆ ಸಂಖ್ಯೆ: 22)ನ್ನು ಜಾರಿಗೊಳಿಸಲಾಗಿದೆ. ಈ ಅಧಿನಿಯಮದ ಪ್ರಕಾರ

ಆಯಾ ಕಛೇರಿ:ಸಂಸ್ಥೆಗಳನ್ನು ಸಾರ್ವಜನಿಕ ಪ್ರಾಧಿಕಾರಿಗಳೆಂದು ಗುರುತಿಸಿ ಸದರಿ ಅಧಿನಿಯಮ ಸೆಕ್ಷನ್ 5(1)ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಆಯಾ ಕಛೇರಿ:ಸಂಸ್ಥೆಗಳಿಗೆ "ಸಾರ್ವಜನಿಕ ಮಾಹಿತಿ ಅಧಿಕಾರಿ" ಹಾಗೂ ಸೆಕ್ಷನ್ 5(2)ರ ಅಡಿಯಲ್ಲಿ "ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ" ಎಂದು ನೇಮಕ ಮಾಡಬೇಕಾಗಿದೆ.

ಅದರಂತೆ ಸಮಾಜ ಕಲ್ಯಾಣ ಇಲಾಖಾ ವ್ಯಾಪ್ತಿಗೆ ಒಳಪಡುವ ಈ ಕೆಳಕಂಡ ಸಂಸ್ಥೆಯನ್ನು ಮಾಹಿತಿ ಹಕ್ಕು ಪಡೆಯಲು ಅಧಿನಿಯಮ 2005ರ ಸೆಕ್ಷನ್ 2(4) ರನ್ವಯ "ಸಾರ್ವಜನಿಕ ಪ್ರಾಧಿಕಾರ" ಎಂದು ಗುರುತಿಸಬೇಕಾಗಿದೆ. ಸದರಿ ಸಂಸ್ಥೆಯಲ್ಲಿ "ಸಾರ್ವಜನಿಕ ಮಾಹಿತಿ ಅಧಿಕಾರಿ" ಹಾಗೂ "ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ" ಗಳನ್ನು ಗುರುತಿಸಲಾಗಿದೆ. ಅದೇ ರೀತಿ ಅಧಿನಿಯಮದ ಸೆಕ್ಷನ್ 19(1)ರ ಅಡಿಯಲ್ಲಿ ಅಧಿನಿಯಮದಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಲು ಆಯಾ ಸಂಸ್ಥೆಗಳಲ್ಲಿ ಮೇಲ್ಮನವಿ ಪ್ರಾಧಿಕಾರ ಎಂದು ಗುರುತಿಸಲಾಗಿದೆ.

| ಕ್ರ. ಸಂ. | ಸಂಸ್ಥೆಯ ಹೆಸರು (ಸಾರ್ವಜನಿಕ ಪ್ರಾಧಿಕಾರ) | ಸಾರ್ವಜನಿಕ ಮಾಹಿತಿ ಅಧಿಕಾರಿ | ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ | ಮೇಲ್ಮನವಿ ಪ್ರಾಧಿಕಾರ |
|---|---|---|---|---|
| 1 | ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳ ಕಛೇರಿ, ಧಾರವಾಡ | ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳು, ಧಾರವಾಡ | ಕಛೇರಿ ಅಧೀಕ್ಷಕರು | ಕಾರ್ಯನಿರ್ವಾಹಕ ಅಧಿಕಾರಿಗಳು, ತಾಲ್ಲೂಕು ಪಂಚಾಯತ್, ಧಾರವಾಡ |

ಪಿ.ಆರ್. 535 ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳು, ಧಾರವಾಡ.

**KARNATAKA STATE CONSUMER DISPUTES REDRESSAL COMMISSION**

**Basava Bhawan, High Grounds, Bangalore-560 001**

**NOTIFICATION No. KSC/ADM/48/2003-04, Dated: 22nd February 2006**

This is to notify that in between the summer vacation period from 24th day of April 2006 to 26th day of May 2006, Karnataka State Consumer Disputes Redressal Commission will conduct **"State Commission Sittings"** on the following days to hear urgent and other matters which are to be posted for Admission, hearing, and Arguments.

| SL.NO. | DAYS | DATES |
|---|---|---|
| 1 | Tuesday | 25.04.2006 |
| 2 | Thursday | 27.04.2006 |
| 3 | Tuesday | 02.05.2006 |
| 4 | Thursday | 04.05.2006 |
| 5 | Tuesday | 09.05.2006 |
| 6 | Thursday | 11.05.2006 |
| 7 | Tuesday | 16.05.2006 |
| 8 | Thursday | 18.05.2006 |
| 9 | Tuesday | 23.05.2006 |
| 10 | Thursday | 25.05.2006 |

By the order of the Hon'ble President,

**K.L. SHIVALINGEGOWDA**

P.R. 543 Registrar-cum-Administrative Officer.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಹಾಸನ ಉಪವಿಭಾಗ, ಹಾಸನ**

**ಸಂಖ್ಯೆ: ಡಬ್ಲ್ಯೂ.ಸಿಎ:ಎಫ್:ಎಸ್ಆರ್-02:2006, ದಿನಾಂಕ: 18ನೇ ಫೆಬ್ರವರಿ 2006**

**ಅರ್ಜಿದಾರರು:** **ವಿರುದ್ಧ** **ಪ್ರತಿವಾದಿಗಳು:**

1) ಬಿ. ನಾರಾಯಣ ಬಿನ್ ನಕ್ಕೂರ 55 ವರ್ಷ
2) ಸುಂದರಿ ಕೋಂ ಬಿ. ನಾರಾಯಣ 45 ವರ್ಷ
3) ಸತೀಶ ಬಿನ್ ಬಿ. ನಾರಾಯಣ 15 ವರ್ಷ
4) ರಮೇಶ ಬಿನ್ ಬಿ. ನಾರಾಯಣ 13 ವರ್ಷ
5) ಮಂಜುನಾಥ ಬಿನ್ ಬಿ. ನಾರಾಯಣ 11 ವರ್ಷ
ಬಂದಿಹಳ್ಳಿ ಗ್ರಾಮ, ಜಮ್ಮನಹಳ್ಳಿ ಅಂಚೆ,
ಬೆಳಗೋಡು ಹೋ: ಸಕಲೇಶಪುರ ತಾ:

1) ಬಿ.ಎಸ್. ಶ್ರೀಚರಣ್ ಬಿನ್ ಲೇಟ್
ಸುರೇಶ್ ಬಿ.ಎಸ್. ಶ್ರೀಚರಣ್,
ಎಸ್ಟೇಟ್ ಮಾಲೀಕರು, ಬಂದಿಹಳ್ಳಿ ಗ್ರಾಮ, ಜಮ್ಮನಹಳ್ಳಿ
ಅಂಚೆ, ಬೆಳಗೋಡು ಹೋ., ಬಾಳ್ಳುಪೇಟೆ, ಸಕಲೇಶಪುರ ತಾ:
2) ದಿ ಡಿವಿಜನಲ್ ಮ್ಯಾನೇಜರ್,
ಓರಿಯಂಟಲ್ ಇನ್ಸೂರೆನ್ಸ್ ಕಂ ಲಿ.,
ಎಸ್.ಎಸ್. ಕಾಂಪ್ಲೆಕ್ಸ್, ಹಾಸನ.

**ಪ್ರಕಟಣೆ**

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಬಾಬು ರವರು ಪ್ರತಿವಾದಿಯಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ: 25.8.2004 ರಂದು ಸಾವನ್ನಪ್ಪಿರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಮೃತರ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸದೊಳಗಾಗಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದು, ಮೇಲೆ

ನಿಗದಿಪಡಿಸಿರುವ ಅವಧಿಯಲ್ಲಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಹಾಸನ ಉಪವಿಭಾಗ, ಹಾಸನ.

ಪಿ.ಆರ್. 547

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಹಾಸನ ಉಪವಿಭಾಗ, ಹಾಸನ**

**ಸಂಖ್ಯೆ: ಡಬ್ಲ್ಯೂ.ಸಿಎ:ಎಫ್:ಎಸ್‌ಆರ್-03:2006, ದಿನಾಂಕ: 20ನೇ ಫೆಬ್ರವರಿ 2006**

**ಅರ್ಜಿದಾರರು:** **ವಿರುದ್ಧ** **ಪ್ರತಿವಾದಿಗಳು:**

1) ಜವರೇಗೌಡ ಬಿನ್ ಜೋಲೆಗೌಡ 52 ವರ್ಷ
2) ಲಕ್ಷ್ಮಮ್ಮ ಕೋಂ ಜವರೇಗೌಡ 45 ವರ್ಷ
ವಾಸ: ಸಿಂಗಾಪುರ ಗ್ರಾಮ, ಕಸಬಾ ಹೋಬಳಿ,
ಹೊಳೆನರಸೀಪುರ ತಾಲ್ಲೂಕು, ಹಾಸನ ಜಿಲ್ಲೆ.

1) ಬಿ.ಎಸ್. ಗೀತಾಮಣಿ ಬಿನ್ ಶಿವಾನಂದಮೂರ್ತಿ
ನಂ.1366:2, ಎಂ.ಆರ್.ಸಿ.ಆರ್. ಲೇಔಟ್, ಕೆ.ಹೆಚ್.ಬಿ.
ಕಾಲೋನಿ, ಬೆಂಗಳೂರು-79,
2) ಯುನೈಟೆಡ್ ಇಂಡಿಯಾ ಇನ್ಶೂರೆನ್ಸ್ ಕಂಪನಿ ಲಿ.,
2ನೇ ಮಹಡಿ, ಇಂಡಿಯನ್ ಮ್ಯೂಜಿಯಲ್ ಬಿಲ್ಡಿಂಗ್, ಎನ್.ಆರ್.
ಸರ್ಕಲ್, ಬೆಂಗಳೂರು-2.

**ಪ್ರಕಟಣೆ**

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಕಾಂತರಾಜು ಅಲಿಯಾಸ್ ರಾಜು ರವರು ಪ್ರತಿವಾದಿಯಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ: 08.03.2005 ರಂದು ಸಾವನ್ನಪ್ಪಿರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಮೃತರ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸದೊಳಗಾಗಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದು, ಮೇಲೆ ನಿಗದಿಪಡಿಸಿರುವ ಅವಧಿಯಲ್ಲಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಹಾಸನ ಉಪವಿಭಾಗ, ಹಾಸನ.

ಪಿ.ಆರ್. 548

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಹಾಸನ ಉಪವಿಭಾಗ, ಹಾಸನ**

**ಸಂಖ್ಯೆ: ಡಬ್ಲ್ಯೂ.ಸಿಎ:ಎಫ್:ಎಸ್‌ಆರ್-04:2006, ದಿನಾಂಕ: 22ನೇ ಫೆಬ್ರವರಿ 2006**

**ಅರ್ಜಿದಾರರು:** **ವಿರುದ್ಧ** **ಪ್ರತಿವಾದಿಗಳು:**

1) ಕೊಟ್ಟೂರಯ್ಯ ಬಿನ್ ಲೇಟ್ ಬಸವಯ್ಯ
2) ಶ್ರೀಮತಿ ನಾಗರತ್ನ ಕೋಂ ಕೊಟ್ಟೂರಯ್ಯ
ಹಾರನಹಳ್ಳಿ ಗ್ರಾಮ, ಕಸಬಾ ಹೋಬಳಿ,
ಅರಸೀಕೆರೆ ತಾಲ್ಲೂಕು, ಹಾಸನ ಜಿಲ್ಲೆ

1) ಹಸೀನಾ ಬೇಗಂ ಕೋಂ ಖಲಂದರ್ ಸಾಬ್,
ಮನೆ ನಂ.ಪಿ-19, ಹೌಸಿಂಗ್ ಬೋರ್ಡ್, ಬೇರು ಪೇಟೆ, ಹೊಸೂರು
ಟೌನ್, ಕೃಷ್ಣಗಿರಿ ಜಿಲ್ಲೆ, ತಮಿಳುನಾಡು.
2) ವ್ಯವಸ್ಥಾಪಕರು, ದಿ ಓರಿಯಂಟಲ್ ಇನ್ಶೂರೆನ್ಸ್ ಕಂ. ಲಿ.,
ಡಿ.ಒ.ವಿ. ಶಂಕರ್ ಹೌಸ್, 3ನೇ ಮಹಡಿ, ನಂ.01, ಆರ್.ಎಂ.ವಿ.
ಬಡಾವಣೆ, ಮಿಕಾರಿ ವೃತ್ತ, ಬೆಂಗಳೂರು-81.

**ಪ್ರಕಟಣೆ**

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಜಗದೀಶ ರವರು ಪ್ರತಿವಾದಿಯಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ: 31.08.2005 ರಂದು ಸಾವನ್ನಪ್ಪಿರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಮೃತರ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸದೊಳಗಾಗಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದು, ಮೇಲೆ ನಿಗದಿಪಡಿಸಿರುವ ಅವಧಿಯಲ್ಲಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಹಾಸನ ಉಪವಿಭಾಗ, ಹಾಸನ.

ಪಿ.ಆರ್. 549

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ-1, ಬಿಜಾಪುರ**

**ಪ್ರಕರಣ ಸಂಖ್ಯೆ: ಕಾಅಬ:ಕಾನಪ:37/2006**

**ಅರ್ಜಿದಾರರು:** **ವಿರುದ್ಧ** **ಪ್ರತಿವಾದಿಗಳು:**

1) ಭಾಗುಬಾಯಿ ನಂದಪ್ಪಾ ಪಾಟೀಲ
ವ: 45, ಉ: ಮನೆಕೆಲಸ
ಸಾ: ಅಥಾಲಟ್ಟಿ, ತಾ:ಜಿ: ವಿಜಾಪುರ

1) ಎಸ್.ಆರ್. ಬನಕಟ್ಟಿ, ಲಾರಿ ಮಾಲಿಕರು,
ನಂ.ಎಂ.ಎಚ್.13/ಆರ್/1061, ಸಾ: ಸೋಲಾಪುರ (ಮಹಾರಾಷ್ಟ್ರ)
2) ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂ. ನಿ., ಗುಲ್ಬರ್ಗಾ.

**ಪ್ರಕಟಣೆ**

ಶ್ರೀ:ಶ್ರೀಮತಿ ಭಾಗುಬಾಯಿ ನಂದಪ್ಪಾ ಪಾಟೀಲ ಇವರುಗಳಾದ ತಾವು ಮೃತ ಹಣಮಂತ ಇವರ ತಾಯಿ ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಹಣಮಂತ ಇವರು ಒಂದನೇ ಪ್ರತಿವಾದಿಗಳಾದ ಎಸ್.ಆರ್. ಬನಕಟ್ಟೆ ಇವರ ಮಿನಿಲಾರಿ ಯಲ್ಲಿ ಚಾಲಕನಾಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನ ಬದ್ದ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಪಿ.ಆರ್. 552 ಉಪವಿಭಾಗ-1, ಬಿಜಾಪುರ.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ-1, ಚಿಕ್ಕಮಗಳೂರು ಜಿಲ್ಲೆ**

**ಸಂಖ್ಯೆ: ಕಾಪಕಾ:ಎಫ್:14:2005**

**ಅರ್ಜಿದಾರರು:**

1) ಶ್ರೀಮತಿ ಮಲಾರ್ ಉರುಫ್ ಮಲ್ಲಿಗಾ
ಕೋಂ ಲೇಟ್ ಮೋಹನರಾಜ್, 21 ವರ್ಷ
2) ಕು. ಅನುಷ D/o ಲೇ. ಶ್ರೀ ಮೋಹನರಾವ್,
ಮೈನರ್ ಪ್ರತಿನಿಧಿ ಗಾರ್ಡಿಯನ್ ತಾಯಿ
3) ಕಾಳಿಯ ಪೆರುಮಾಳ S/o ವೀರಮುತ್ತು, 60 ವರ್ಷ ಕೂಲಿ ಕೆಲಸ.
ವಾಸ: ಹಿರೇಬಿದರೆ ವಿಲೇಜ್, ಜಾಗರ ಹೋಬಳಿ,
ತೊಗರಿ ಹಂಕಲ್ ಅಂಚೆ, ಚಿಕ್ಕಮಗಳೂರು ತಾಲ್ಲೂಕು.

**ವಿರುದ್ಧ**

**ಪ್ರತಿವಾದಿಗಳು:**

1) ಬಸವೇಗೌಡ S/o ಮಲ್ಲೇಗೌಡ, 60 ವರ್ಷ,
ಕಾಫಿ ಪ್ಲಾಂಟರ್ ಜಾನ್‌ಬಾಸ್ ಎಸ್ಟೇಟ್,
ಗೋಣಕಲ್ ವಿಲೇಜ್, ತೊಗರಿಹಂಕಲ್ ಅಂಚೆ,
ಚಿಕ್ಕಮಗಳೂರು ತಾಲ್ಲೂಕು.

**ಪ್ರಕಟಣೆ**

ಮೋಹನರಾಜ್ ಎಂಬುವವರು ಪ್ರತಿವಾದಿಯಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ: 15.3.2005 ರಂದು ಅಪಘಾತ ಉಂಟಾಗಿ ಮೃತಪಟ್ಟಿರುವ ಬಗ್ಗೆ ಪರಿಹಾರ ಕೋರಿ ಮೇಲ್ಕಂಡ ಅರ್ಜಿದಾರರು ಅರ್ಜಿಯನ್ನು ಈ ನ್ಯಾಯಾಲಯದಲ್ಲಿ ಸಲ್ಲಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೆ ಇದ್ದಲ್ಲಿ ಅರ್ಜಿದಾರರನ್ನು ಹೊರತುಪಡಿಸಿ ಮೃತನ ಅವಲಂಬಿತರು ಯಾರು ಇಲ್ಲ ಎಂದು ಪರಿಗಣಿಸಿ ಮೇಲ್ಕಂಡ ಅರ್ಜಿದಾರರ ಕ್ಲೇಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಕೈಗೊಳ್ಳಲಾಗುವುದು.

**ಆರ್.ಬಿ. ಬಾಗೇವಾಡಿ**
ಪಿ.ಆರ್. 550 ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಉಪವಿಭಾಗ-1, ಚಿಕ್ಕಮಗಳೂರು.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ-2, ಚಿಕ್ಕಮಗಳೂರು ಜಿಲ್ಲೆ**

**ಸಂಖ್ಯೆ: ಕಾಪಕಾ:ಎಫ್:22:2005**

**ಅರ್ಜಿದಾರರು:**

ಶ್ರೀಮತಿ ಪ್ರಭಾವತಿ ಕೋಂ ಲೇಟ್ ಸಾಂಬಮೇಸ್ತ್ರಿ
ಕೈಮರ ಗ್ರಾಮ ಮತ್ತು ಅಂಚೆ,
ಚಿಕ್ಕಮಗಳೂರು ತಾಲ್ಲೂಕು.

**ವಿರುದ್ಧ**

**ಪ್ರತಿವಾದಿಗಳು:**

1) ಶ್ರೀಮತಿ ಅಶ್ವಿನಿ ಶೆಟ್ಟಿ, ಆಡಳಿತ ವರ್ಗ, ಕ್ಲಾಸಿಕ್ ಪ್ಲಾಂಟೇಷನ್ಸ್
ಅಮ್ಮಡಿ ಎಸ್ಟೇಟ್, ಮೇಲಿನಪೇಟೆ ಕೊಪ್ಪ.
2) ಶ್ರೀ ಕೆ. ಭಾಸ್ಕರ ಶೆಟ್ಟಿ, ಅಮ್ಮಡಿ ಎಸ್ಟೇಟ್ (ಕ್ಲಾಸಿಕ್
ಪ್ಲಾಂಟೇಷನ್ಸ್) ಕೊಪ್ಪ.

**ಪ್ರಕಟಣೆ**

ಎಂಬುವವರು ಪ್ರತಿವಾದಿಯಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ: 22.01.2002 ರಂದು ಅಪಘಾತ ಉಂಟಾಗಿ ಮೃತಪಟ್ಟಿರುವ ಬಗ್ಗೆ ಪರಿಹಾರ ಕೋರಿ ಮೇಲ್ಕಂಡ ಅರ್ಜಿದಾರರು ಅರ್ಜಿಯನ್ನು ಈ ನ್ಯಾಯಾಲಯದಲ್ಲಿ ಸಲ್ಲಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೆ ಇದ್ದಲ್ಲಿ ಅರ್ಜಿದಾರರನ್ನು ಹೊರತುಪಡಿಸಿ ಮೃತನ ಅವಲಂಬಿತರು ಯಾರು ಇಲ್ಲ ಎಂದು ಪರಿಗಣಿಸಿ ಮೇಲ್ಕಂಡ ಅರ್ಜಿದಾರರ ಕ್ಲೇಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಕೈಗೊಳ್ಳಲಾಗುವುದು.

**ಆರ್.ಬಿ. ಬಾಗೇವಾಡಿ**
ಪಿ.ಆರ್. 551 ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಉಪವಿಭಾಗ-2, ಚಿಕ್ಕಮಗಳೂರು.

**ಕಾರ್ಮಿಕ ಅಧಿಕಾರಿ ವ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ-1, ವಿಜಾಪೂರ ಜಿಲ್ಲೆ, ವಿಜಾಪೂರ**

**ಪ್ರಕರಣ ಸಂಖ್ಯೆ: ಡಬ್ಲೂಸಿಎ/ಎಸ್‌ಆರ್-53:2006, ದಿನಾಂಕ: 16ನೇ ಫೆಬ್ರವರಿ 2006**

**ಅರ್ಜಿದಾರರು:** **ವಿರುದ್ಧ** **ಪ್ರತಿವಾದಿಗಳು:**

1) ವಿಶ್ವನಾಥ ಶೀಲವಂತ ಮಾನೆ, ವ: 55, ಉದ್ಯೋಗ ಕೂಲಿ, ಸಾ: ಜೋಗಿಗಲ್ಲಿ, ವಿಜಾಪೂರ.
2) ಶಾಂತಾಬಾಯಿ ವಿಶ್ವನಾಥ ಮಾನೆ, ವ: 50, ಉದ್ಯೋಗ: ಮನೆಕೆಲಸ, ಸಾ: ಜೋಗಿಗಲ್ಲಿ ವಿಜಾಪೂರ.

1) ರೇವಣಸಿದ್ದಪ್ಪಾ ಆರ್ ಕೋರದೆ, ಟ್ರಾಕ್ಟರ್ ಮಾಲೀಕರು, ನಂ. ಎಂಎಚ್ 13/7129, ಸಾ: ಅಂಕಲಗಿ ತಾ: ಅಕ್ಕಲ ಕೋಟ, ಜಿ: ಸೋಲಾಪೂರ.
2) ನ್ಯಾಶನಲ್ ಇನ್ಸೂರೆನ್ಸ್, ಬೆಳಗಾವಿ.

**ಪ್ರಕಟಣೆ**

ಮೇಲ್ಕಾಣಿಸಿದ ಅರ್ಜಿದಾರರು ಈ ನ್ಯಾಯಾಲಯದಲ್ಲಿ ಅರ್ಜಿಯೊಂದನ್ನು ಸಲ್ಲಿಸಿ, ಶ್ರೀ ಬಸದವರಾಜ ವಿಶ್ವನಾಥ ಮಾನೆ ಇವರು ಪ್ರತಿವಾದಿಗಳ ಬಳಿ ಕೆಲಸ ನಿರ್ವಹಿಸುವಾಗ ಮತ್ತು ಕೆಲಸದ ಪರಿಣಾಮದಿಂದಾಗಿ ದಿನಾಂಕ: 14.02.2006 ರಂದು ಅಪಘಾತಕ್ಕೀಡಾಗಿ ಮೃತನಾಗಿರುತ್ತಾನೆಂದು, ಅಲ್ಲದೇ ತಾವು ಮೃತರ ಅವಲಂಬಿತರಾಗಿರುವುದರಿಂದ ಕಾಯ್ದೆಯನ್ವಯ ತಮಗೆ ಬರಬೇಕಾದ ಪರಿಹಾರದ ಹಣವನ್ನು ಪ್ರತಿವಾದಿಗಳಿಂದ ಕೊಡಿಸಿಕೊಡಬೇಕೆಂದು ವಿನಂತಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಪರ ಆಕ್ಷೇಪಣೆಯಾಗಲೀ ಅಥವಾ ಅರ್ಜಿಯಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸಬೇಕು. ಹಾಗೂ ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಮತ್ತು ಅರ್ಜಿಗಳು ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೇಮ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಅರ್ಜಿಗಳನ್ನು ಮತ್ತು ಆಕ್ಷೇಪಣೆಗಳನ್ನು ಸ್ವೀಕರಿಸಲಾಗುವುದಿಲ್ಲ.

**ಎಂ.ಡಿ. ಇಂಡಿ**

ಪಿ.ಆರ್. 583

ಕಾರ್ಮಿಕ ಅಧಿಕಾರಿ ವ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಉಪವಿಭಾಗ-1, ವಿಜಾಪುರ.

**ಕಾರ್ಮಿಕ ಅಧಿಕಾರಿ ವ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ-1, ವಿಜಾಪೂರ ಜಿಲ್ಲೆ, ವಿಜಾಪೂರ**

**ಪ್ರಕರಣ ಸಂಖ್ಯೆ: ಡಬ್ಲೂಸಿಎ/ಎಸ್‌ಆರ್-42:2006, ದಿನಾಂಕ: 14ನೇ ಫೆಬ್ರವರಿ 2006**

**ಅರ್ಜಿದಾರರು:** **ವಿರುದ್ಧ** **ಪ್ರತಿವಾದಿಗಳು:**

1) ಸೂರ್ಯಕಾಂತ ದರೆಪ್ಪಾ ಹಕ್ಕೆ, ವ: 45, ಉ: ಕೃಷಿ, ಸೌ: ಮೆಳಗಿ, ತಾ: ಇಂಡಿ, ಜಿ: ವಿಜಾಪೂರ.
2) ಸಿಂದೂಬಾಯಿ ಸೂರ್ಯಕಾಂತ ಹಕ್ಕೆ, ವ: 40, ಉ: ಮನೆಕೆಲಸ, ಸೌ: ಮೆಳಗಿ, ತಾ: ಇಂಡಿ, ಜಿ: ವಿಜಾಪುರ

1) ಪುಲಕೇಶಿ ಪುರುಷೋತ್ತಮ ಗಲಗಲಿ, ವ: ಮೇಜರ್ ಉ: ಲಾರಿ ಮಾಲೀಕರು, ನಂ.ಕೆಎ 28/ಬಿ/ 6951, ಸೌ: ಹಳಸಂಗಿ ತಾ: ಇಂಡಿ, ಜಿ: ವಿಜಾಪೂರ.
2) ಮ್ಯಾನೇಜರ್ ನ್ಯೂ ಇಂಡಿಯಾ ಇನ್ಸೂರೆನ್ಸ್ ಕಂ. ಲಿ., ಗುಲ್ಬರ್ಗಾ.

**ಪ್ರಕಟಣೆ**

ಮೇಲ್ಕಾಣಿಸಿದ ಅರ್ಜಿದಾರರು ಈ ನ್ಯಾಯಾಲಯದಲ್ಲಿ ಅರ್ಜಿಯೊಂದನ್ನು ಸಲ್ಲಿಸಿ, ಶ್ರೀ ಈರಣ್ಣ ಸೂರ್ಯಕಾಂತ ಹಕ್ಕೆ ಇವರು ಪ್ರತಿವಾದಿಗಳ ಬಳಿ ಕೆಲಸ ನಿರ್ವಹಿಸುವಾಗ ಮತ್ತು ಕೆಲಸದ ಪರಿಣಾಮದಿಂದಾಗಿ ದಿನಾಂಕ: 7.02.2006 ರಂದು ಅಪಘಾತಕ್ಕೀಡಾಗಿ ಮೃತನಾಗಿರುತ್ತಾನೆಂದು, ಅಲ್ಲದೇ ತಾವು ಮೃತರ ಅವಲಂಬಿತರಾಗಿರುವುದರಿಂದ ಕಾಯ್ದೆಯನ್ವಯ ತಮಗೆ ಬರಬೇಕಾದ ಪರಿಹಾರದ ಹಣವನ್ನು ಪ್ರತಿವಾದಿಗಳಿಂದ ಕೊಡಿಸಿಕೊಡಬೇಕೆಂದು ವಿನಂತಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಪರ ಆಕ್ಷೇಪಣೆಯಾಗಲೀ ಅಥವಾ ಅರ್ಜಿಯಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸಬೇಕು. ಹಾಗೂ ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಮತ್ತು ಅರ್ಜಿಗಳು ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೇಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಅರ್ಜಿಗಳನ್ನು ಮತ್ತು ಆಕ್ಷೇಪಣೆಗಳನ್ನು ಸ್ವೀಕರಿಸಲಾಗುವುದಿಲ್ಲ.

**ಎಂ.ಡಿ. ಇಂಡಿ**

ಪಿ.ಆರ್. 553

ಕಾರ್ಮಿಕ ಅಧಿಕಾರಿ ವ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಉಪವಿಭಾಗ-1, ವಿಜಾಪುರ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ-2, ಬಿಜಾಪುರ**

**ಪ್ರಕರಣ ಸಂಖ್ಯೆ: ಕಾಅಬ:ಕಾನಪ:ಮಪ್ರ:ಎಸ್‌ಆರ್-57:2006, ದಿನಾಂಕ: 20ನೇ ಫೆಬ್ರವರಿ 2006**

**ಅರ್ಜಿದಾರರು:** **ವಿರುದ್ಧ** **ಪ್ರತಿವಾದಿಗಳು:**

1) ವಿಠಲ ತಂದೆ ಜೀವಸಿಂಗ್ ಧಪೇದಾರ
2) ಗಂಗಾಬಾಯಿ ಗಂಡ ವಿಠಲ ಧಪೇದಾರ
3) ಸಂಬಾಜಿ ತಂದೆ ವಿಠಲ ಧಪೇದಾರ
4) ಗೋಪಾಲ ತಂದೆ ವಿಠಲ ಧಪೇದಾರ
ವಾಸ: ಹಡಲಸಂಗ, ತಾಲ್ಲೂಕ ಇಂಡಿ,
ಸಧ್ಯದ ವಾಸ: ಸ್ಟೇಷನ್ ಬ್ಯಾಕ್ ರೋಡ್, ಬಿಜಾಪುರ

1) ಶ್ರೀಮತಿ ನೀಲವ್ವ ಎಂ ಜಂಬಗಿ, ವಾಸ: ಹೋರ್ತಿ, ತಾಲ್ಲೂಕು ಇಂಡಿ, ಜಿಲ್ಲೆ ಬಿಜಾಪೂರ.
2) ದಿ ಬ್ರ್ಯಾಂಚ್ ಮ್ಯಾನೇಜರ್, ನ್ಯೂ ಇಂಡಿಯಾ ಅಸೂರೆನ್ಸ್ ಕಂ. ಲಿ., ಗುಲ್ಬರ್ಗಾ.

